# ಸಾಂಗಸಿ

ತಿಂಗಳ ಪತ್ರಿಕೆ

ಮೇ : 1999

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 14 ಸಂಚಿಕೆ : 4

ಏಪ್ರಿಲ್ - ಮೇ : 1999





ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067



| | | | |
|---|---|---|---|
| ಸೂಚನೆ : | ಬಿಡಿ ಪ್ರತಿ | **3-00** | ರೂ. |
| | ವಾರ್ಷಿಕ ಚಂದಾ | **40-00** | ರೂ. |

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ......**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಮಹಿಳೆಯರ ಸಮಸ್ಯೆಗೆ ಸಂಘಟನೆಯೊಂದೇ ದಾರಿ. ಮಹಿಳೆಯರು ಸಂಘಟನೆಯಾಗುವುದರ ಮೂಲಕ ಅವರ ಸಮಸ್ಯೆಗಳಿಗೆ ಹೇಗೆ ಪರಿಹಾರ ಕಂಡುಕೊಳ್ಳಬಹುದೆಂಬುದನ್ನು ಮಹಿಳಾ ಹೋರಾಟದ ಇತಿಹಾಸ ತೋರಿಸಿ ಕೊಟ್ಟಿದೆ. ಅಗೋಚರವಾಗಿದ್ದ ನಾಲ್ಕು ಗೋಡೆಯೊಳಗಡೆ ಮಹಿಳೆಯರ ಮೇಲಿನ ಕ್ರೌರ್ಯ ಸಹ ಇಂದು ರಾಜಕೀಯ ಆಯಾಮ ಪಡೆದು ಸಂಘಟನೆಯ ಮೂಲಕ ಪರಿಹಾರವನ್ನು ಹುಡುಕುವ ಯತ್ನ ನಮ್ಮ ಕಣ್ಣು ಮುಂದಿದೆ.

ಈ ಸಂಘಟನಾ ಪ್ರಯತ್ನ ಸಂಪ್ರದಾಯಿಕ ಸಂಘಟನಾ ತಂತ್ರದ ದೃಷ್ಟಿಕೋನವನ್ನು ಮೀರಿ ಬೆಳೆಯುತ್ತಿರುವುದು ಸ್ವಾಗತಾರ್ಹ. ಸಂಘಟನೆಯ ಸಂಪ್ರದಾಯಿಕ ಚೌಕಟ್ಟು ಮೀರಿ, ಅಸಂಘಟಿತ ಕ್ಷೇತ್ರದಲ್ಲಿನ ಜನರು ಸಂಘಟನೆಯಾಗುತ್ತಿರುವುದು ಕೆಲವು ಮೂಲಭೂತ ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತದೆ. ವೇಶ್ಯಾವೃತ್ತಿಯಲ್ಲಿರುವ ಮಹಿಳೆಯರು ನಡೆಸುತ್ತಿರುವ ಹೋರಾಟ, ಸ್ಥಳಾಂತರ ಸಮಸ್ಯೆಯನ್ನು ಎದುರಿಸುತ್ತಿರುವ ಹೋರಾಟ ಇದಕ್ಕೆ ಉತ್ತಮ ನಿದರ್ಶನ.

ವೇಶ್ಯಾವೃತ್ತಿಯಲ್ಲಿನ ಮಹಿಳೆಯರು ನಡೆಸುತ್ತಿರುವ ಹೋರಾಟ ಜ್ವಲಂತ ಸಮಸ್ಯೆಯ ವಿವಿಧ ಮುಖಗಳನ್ನು, ಆಯಾಮಗಳನ್ನು ಜನರ ಮುಂದಿಡುತ್ತದೆ. ಇವುಗಳನ್ನು ಸಾರ್ವಜನಿಕವಾಗಿ ಚರ್ಚಿಸುವುದರ ಮೂಲಕ ನಿಷಿದ್ಧದ ಪೊರೆಯನ್ನು ಕಳಚಲಾಗಿದೆ. ಈ ಸಮಸ್ಯೆಯ ಸಂಕೀರ್ಣತೆಯನ್ನು ಸಾರ್ವಜನಿಕವಾಗಿ ಚರ್ಚಿಸುವ ಅನಿವಾರ್ಯತೆಯನ್ನು, ಅಗತ್ಯವನ್ನು ಈ ಮಹಿಳೆಯರ ಹೋರಾಟ ಹುಟ್ಟಿಹಾಕಿದೆ.

ವೇಶ್ಯಾವೃತ್ತಿಯಲ್ಲಿ ಸಮಸ್ಯೆಯ ದೃಷ್ಟಿಕೋನವನ್ನು ನೋಡುವ ದೃಷ್ಟಿಕೋನದಲ್ಲಿ ಪರಿಹಾರವನ್ನು ಹುಡುಕುವುದರಲ್ಲಿ ವಿವಿಧ ಮಾರ್ಗಗಳಿರಬಹುದು. ಅನೇಕ ವಾದ ವಿವಾದಗಳಿರಬಹುದು. ಆದರೆ ಭಿನ್ನತೆಯಲ್ಲೂ ಈ ಮಹಿಳೆಯರು ಸಂಘಟಿತರಾಗುವ ಅಗತ್ಯವನ್ನು ಅನಿವಾರ್ಯತೆಯನ್ನು ಮೂಲಭೂತವಾಗಿ ಎಲ್ಲರೂ ಒಪ್ಪಿಕೊಳ್ಳಲೇಬೇಕಾಗುತ್ತದೆ.

●

ಮಾನಸ ಓದುಗರಿಗೆ ಮೇ ದಿನಾಚರಣೆಯ ಶುಭಾಶಯಗಳು

# ವೇಶ್ಯಾವೃತ್ತಿಗೆ ಕಾನೂನು ಮನ್ನಣೆ - ಒಂದು ಚರ್ಚೆ

ವೇಶ್ಯಾವೃತ್ತಿಗೆ ಕಾನೂನು ಮನ್ನಣೆ ಸಿಗಬೇಕೆಂಬ ಬೇಡಿಕೆ ಹಲವಾರು ಮೂಲಭೂತವಾದ ಪ್ರಶ್ನೆಗಳನ್ನು ಸಮಾಜದ ಮುಂದಿಡುತ್ತದೆ. ವೇಶ್ಯೆಯರು ಹೋರಾಡುತ್ತಿರುವ ಈ ಬೇಡಿಕೆಯಿಂದ ವೇಶ್ಯಾವೃತ್ತಿಗೆ ಅಂಟಿರುವ ಹಣೆಪಟ್ಟಿಯನ್ನು ಕಿತ್ತೊಗೆದು, ಬದಲಾಗುತ್ತಿರುವ ರಾಜಕೀಯ, ಆರ್ಥಿಕ, ಜಾಗತೀಕರಣದ ಹಿನ್ನೆಲೆಯಲ್ಲಿ ಅವರ ಸಮಸ್ಯೆಯನ್ನು ನೋಡಬೇಕಾಗುತ್ತದೆ. ಕಾನೂನು ಮನ್ನಣೆಯ ಬೇಡಿಕೆ ವಿವಾದಾತ್ಮಕವಾದ ಸಂಗತಿಯಾಗಿದ್ದರೂ, ಈ ಬೇಡಿಕೆಯು ಅವರ ಸಮಸ್ಯೆಗಳನ್ನು ಮುಕ್ತವಾಗಿ ಚರ್ಚಿಸುವ ಅವಕಾಶವನ್ನು ಉಂಟುಮಾಡಿದೆ. ಈ ಹಿನ್ನೆಲೆಯಲ್ಲಿ ವೇಶ್ಯಾವೃತ್ತಿಯಲ್ಲಿನ ಸಮಸ್ಯೆಗಳನ್ನು ಹೊಸ ದೃಷ್ಟಿಕೋನದಿಂದ ನೋಡುವುದು ಅತ್ಯಗತ್ಯವಾಗಿದೆ.

ಜಗತ್ತಿನ ಪುರಾತನ ವೃತ್ತಿಯಾದ ವೇಶ್ಯಾವೃತ್ತಿಯಲ್ಲಿನ ಸ್ತ್ರೀಯರನ್ನು ಸಮಾಜ ವಿವಿಧ ಹೆಸರಿನಲ್ಲಿ ಕರೆಯುತ್ತಾ ಬಂದಿದೆ. ಇದನ್ನು ವೇಶ್ಯಾವೃತ್ತಿಯೆಂದು ಕರೆದರೂ ಅದು ವೃತ್ತಿಯಲ್ಲ. ಲೈಂಗಿಕತೆಗೆ ಸಂಬಂಧಪಟ್ಟ ನೀತಿ, ನಿಯಮಗಳು, ಪುರುಷ ಪ್ರಧಾನವಾದ, ಶ್ರೇಣೀಕೃತ ವರ್ಗ ವ್ಯವಸ್ಥೆಯಿಂದ ವ್ಯಾಖ್ಯಾನಿತ ರೂಢಿಗಳು ವೇಶ್ಯಾವೃತ್ತಿಯನ್ನು ಭಿನ್ನ ಭಿನ್ನ ಕಾಲ ಹಾಗೂ ಸಂಸ್ಕೃತಿಯಲ್ಲಿ ಬೆಳೆಸಿಕೊಂಡು ಬಂದಿದೆ. ವೇಶ್ಯಾವೃತ್ತಿ ಪ್ರಸ್ತುತ ಜಾಗತಿಕ ಹಾಗೂ ಕೈಗಾರಿಕಾ ಸಮಾಜದಲ್ಲಿ ಸ್ತ್ರೀಯರ ಮಾರಾಟಕ್ಕೆ ತಕ್ಕ ನೆಲೆಯನ್ನೂ ಕಂಡುಕೊಂಡಿದೆ. ಇಲ್ಲಿ ಮಾನವ ಘನತೆಯನ್ನು ಕೇವಲ ಒಂದು ಆರ್ಥಿಕ ಉತ್ಪಾದನೆಯ ಮಟ್ಟಕ್ಕೆ ಇಳಿಸಿದೆ. ಇದು ಸ್ತ್ರೀಯರನ್ನು ಉಪಭೋಗದ ವಸ್ತುವನ್ನಾಗಿ ಪರಿಗಣಿಸುವುದಲ್ಲದೆ, ಆಕೆಯ ವ್ಯಕ್ತಿತ್ವ ನಾಶದ ಧೋರಣೆಗೆ ಮಣೆ ಹಾಕುತ್ತದೆ. ಆದುದರಿಂದ ಸಂಕೀರ್ಣವಾದ ಈ ಸಮಸ್ಯೆ ಇಂದು ಹೆಚ್ಚು ಶೋಷಿತವಾದ ವ್ಯಾಪಾರವಾಗಿ ಕಾಣಿಸುತ್ತದೆ. ಮಹಿಳೆ ಮತ್ತು ಮಕ್ಕಳನ್ನು ಬಂಡವಾಳ ಮಾಡಿಕೊಳ್ಳುವ ಈ ವ್ಯಾಪಾರ ಅಮಾನುಷವಾಗಿ ಸ್ತ್ರೀಯರ ಮೇಲೆ ನಡೆಯುವ ಹಿಂಸೆಯನ್ನು ತೀವ್ರಗೊಳಿಸುತ್ತದೆಯಲ್ಲದೆ, ಅಂತಹ ಕ್ರೂರ ಹಿಂಸೆಯ ಪೋಷಣೆಗೆ ನೀರೆರೆಯುತ್ತದೆ.

ಅಪಹರಣ, ಅತ್ಯಾಚಾರ, ಯುವಕರನ್ನು ಹಾಗೂ ಯುವತಿಯರನ್ನು ಬಲಾತ್ಕಾರದಿಂದ ಲೈಂಗಿಕ ಕ್ರಿಯೆಗೆ ಒಳಪಡಿಸುವುದು, ಹಿಂಸೆ, ಹೊಡೆಯುವುದು, ಸಿಗರೇಟಿನಿಂದ ಸುಡುವುದು, ಒತ್ತಾಯದ ಗರ್ಭಪಾತ, ಈ ರೀತಿಯ ಸುವ್ಯವಸ್ಥಿತ ವ್ಯಾಪಾರಕ್ಕೆ ಕೊನೆಯಿಲ್ಲ. ಶ್ರೀಮಂತ ರಾಷ್ಟ್ರಗಳ ಬೇಡಿಕೆಗಳು, ಛಿದ್ರ ಛಿದ್ರವಾಗುತ್ತಿರುವ ಗ್ರಾಮೀಣ ಪ್ರದೇಶಗಳು ಹಾಗು ಬುಡಕಟ್ಟುಗಳಿಂದ ಪೂರೈಕೆಯಾಗುತ್ತಿವೆ. ಕಾನೂನು ಬಾಹಿರವಾದ, ಮಾದಕ ವಸ್ತು ಮತ್ತು ಶಸ್ತ್ರಾಸ್ತ್ರಗಳ ವ್ಯಾಪಾರವನ್ನು ಬಿಟ್ಟರೆ, ಈ ಮಾಂಸದ ವ್ಯಾಪಾರವು ಬಿಲಿಯನ್ ಡಾಲರ್‌ಗಳ ವ್ಯಾಪಾರವಾಗಿದೆ.

ಜಾಗತೀಕರಣದ ಪರಿಣಾಮವಾಗಿ ಇತರ ವ್ಯಾಪಾರದಂತೆ ವೇಶ್ಯಾವೃತ್ತಿಯು ಸ್ಥಳೀಯ ಮಾರುಕಟ್ಟೆಯನ್ನು ಮೀರಿ ಹೊಸ ಮಾರುಕಟ್ಟೆಯ ಹರವನ್ನು ಪಡೆದಿದೆ. ಈ ವ್ಯವಸ್ಥೆಯನ್ನು ವೇಶ್ಯಾವಾಟಿಕೆಯ ಯಜಮಾನರು, ತಲೆ ಹಿಡುಕರು, ಗ್ರಾಹಕರು, ಜಂಟಿಯಾಗಿ ಪೋಷಿಸಿರುವಂತೆ, ರಾಜ್ಯ ಸಹ ಇದನ್ನು ಸಂಘಟಿತವಾಗಿ ನಡೆಸಲು ಪ್ರೇರೇಪಿಸುತ್ತದೆ ಹಾಗೂ ಅಪರಾಧೀಕೃತಗೊಳಿಸುತ್ತದೆ. ಅಂತರ ರಾಷ್ಟ್ರೀಯ ಮಾರುಕಟ್ಟೆಯ ಬೇಡಿಕೆಗಳನ್ನು ಈಡೇರಿಸುವ ಉದ್ದೇಶದಿಂದ, ಮಹಿಳೆ ಮತ್ತು ಮಕ್ಕಳನ್ನು ಈ ವೃತ್ತಿಗೆ ತಳ್ಳಲು ಸಾಂಸ್ಥಿಕ ಬೆಂಬಲವನ್ನು ಸರ್ಕಾರ ನೀಡುತ್ತಿದೆ. ಹೊಸ ಆರ್ಥಿಕ ನೀತಿ, ಪ್ರವಾಸೋದ್ಯಮ, ಯುದ್ಧ, ಘರ್ಷಣೆ ಮುಂತಾದವುಗಳು ಇದಕ್ಕೆ ಉತ್ತಮ ನಿದರ್ಶನಗಳು.

ಆರ್ಥಿಕ ಬೆಳವಣಿಗೆಯ ಉದ್ದೇಶದಿಂದ ಹೊಸ ಆರ್ಥಿಕ ನೀತಿ ಹಾಗೂ ಅಭಿವೃದ್ಧಿಯ ದೃಷ್ಟಿಕೋನ ಬಡತನವನ್ನು ಹುಟ್ಟು ಹಾಕುವುದರಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಜನರು ಕೇವಲ ಬದುಕುವ ಮಾರ್ಗವನ್ನು ಹುಡುಕುತ್ತಾ ಸ್ಥಳಾಂತರಗೊಳ್ಳುತ್ತಿದ್ದಾರೆ. ಹೀಗೆ ಅವರು ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಮಾರುಕಟ್ಟೆಯ ಬೃಹತ್ ತೆಕ್ಕೆಗೆ ಸುಲಭವಾಗಿ ಸಿಗುತ್ತಾರೆ. ಈ ಕಾರಣದಿಂದ ಮೂರನೇ ಜಗತ್ತಿನ ಶ್ರಮಶಕ್ತಿಯನ್ನು ಶೋಷಣೆಗೆ ಗುರಿಮಾಡಲಾಗುತ್ತದೆ. ಕಾನೂನು ಮನ್ನಣೆ ಪಡೆದ ಕೆಲಸಗಳಾದ ಮನೆಕೆಲಸ, ಬಟ್ಟೆ ಕೈಗಾರಿಕೆ, ಅಥವಾ ನೇರವಾಗಿ ಲೈಂಗಿಕ ಪ್ರವಾಸೋದ್ಯಮದಲ್ಲಿ ಸ್ತ್ರೀಯರ ಶ್ರಮ ಶಕ್ತಿಯ ಶೋಷಣೆ ನಡೆಯುತ್ತದೆ.

ಪ್ರವಾಸೋದ್ಯಮ, ಅಭಿವೃದ್ಧಿಯ ಏಣಿಯನ್ನು

ಸುಲಭವಾಗಿ ಪಿರುವ ಇನ್ನೊಂದು ಮಾರ್ಗ. ಇದರ ಮೂಲಕ ಶೀಘ್ರವಾಗಿ ವಿದೇಶಿ ವಿನಿಮಯವನ್ನು ಗಳಿಸಬಹುದು. ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆಗಳು ದಕ್ಷಿಣಪೂರ್ವ ಹಾಗೂ ಏಷಿಯನ್ ಭಾಗಗಳಲ್ಲಿ ಪ್ರವಾಸೋದ್ಯಮ ಹಾಗೂ ಮನೋರಂಜನೆಯ ಕೈಗಾರಿಕೆಗಳನ್ನು ಬೆಳೆಸಲು ಪ್ರೋತ್ಸಾಹ ನೀಡುತ್ತವೆ. ಇದರಿಂದಾಗಿ ಸಾಲದ ಮರುಪಾವತಿಯ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಿಕೊಳ್ಳಬಹುದಾಗಿದೆ. ಹಾಗಾಗಿ ಪ್ರವಾಸೋದ್ಯಮ ಇಂದು ಉಪಭೋಗದ ಒಂದು ಚಟುವಟಿಕೆಯಾಗಿದೆ. ಈ ವ್ಯಾಪಾರಿ ಸಂಸ್ಕೃತಿಯಿಂದಾಗಿ ಜನರು ತಮ್ಮ ಜಮೀನು, ಬದುಕುವ ಶೈಲಿ ಮಹಿಳೆಯರು ಹಾಗೂ ಮಕ್ಕಳನ್ನು ಮಾರಾಟ ಮಾಡುತ್ತಿದ್ದಾರೆ. ಪ್ರವಾಸೋದ್ಯಮದ ಆರ್ಥಿಕತೆಯು ಲೈಂಗಿಕ ಪ್ರವಾಸೋದ್ಯಮಕ್ಕೆ ಮೌನವಾಗಿ ಪರವಾನಗಿಯನ್ನು ನೀಡುತ್ತದೆ.

ಲೈಂಗಿಕ ಮಾರುಕಟ್ಟೆಯನ್ನು ಥೈಲೆಂಡ್ ಮುಂತಾದ ದೇಶಗಳು ಪರಿಚಯಿಸಿರುವುದು ತುಂಬಾ ಸ್ಪಷ್ಟವಾಗಿದೆ. ಥೈಲೆಂಡಿನ ಉಪ ಮುಖ್ಯಮಂತ್ರಿ "ಸುಂದರ ತಾಣಗಳ" ಅಭಿವೃದ್ಧಿ ಹಾಗೂ ನಿರ್ದಿಷ್ಟ ಮನೋರಂಜನೆಯ ವಿಧಾನಗಳ ಅಭಿವೃದ್ಧಿಗಾಗಿ ಶಿಫಾರಸ್ಸು ಮಾಡಿದ್ದರು. ಮನೋರಂಜನೆಯ ಲೈಂಗಿಕ ಉದ್ದಿಮೆ ಸುಂದರವಾದ, ಮಹಿಳೆಯರು ಬಿಳಿಯ ಪುರುಷರನ್ನು ಉದ್ರೇಕಗೊಳಿಸುವ ರೀತಿಯಲ್ಲಿ ಪ್ರೀತಿಸುವಂತೆ ಪ್ರೇರೇಪಿಸುತ್ತದೆ. ಬೇರೆ ದೇಶಗಳಲ್ಲಿ ಈ ವೃತ್ತಿಗಾಗಿ ಸಮಾಜದಿಂದ ದೂಷಿತರಾದರೆ, ಇಲ್ಲಿ ಯಾವ ಶಿಕ್ಷೆಯನ್ನು ಅನುಭವಿಸಬೇಕಾಗಿಲ್ಲವೆಂಬ ಭರವಸೆಯನ್ನು ನೀಡುತ್ತದೆ.

ರಾಜಕೀಯ ಕಾರಣಕ್ಕಾಗಿಯೇ ನಡೆಯುವ ಯುದ್ಧ, ಘರ್ಷಣೆಯ ಸಂದರ್ಭದಲ್ಲಿ ಜನರು ಅಪರಿಚಿತ ದೇಶಗಳಲ್ಲಿ ಆಶ್ರಯ ಪಡೆಯುತ್ತಾರೆ. ಇಂತಹ ಸಂದರ್ಭಗಳಲ್ಲಿ ಸ್ತ್ರೀಯರು ತುಂಬಾ ದುರ್ಬಲರಾಗಿರುತ್ತಾರೆ. ಹಾಗಾಗಿ ಅತ್ಯಾಚಾರ, ಲೈಂಗಿಕ ಹಿಂಸೆ, ಕಿರುಕುಳ ಹಾಗೂ ವೇಶ್ಯಾವೃತ್ತಿಗೆ ಬಲಿಯಾಗುತ್ತಾರೆ. ಥೈಲಾಂಡ್ ಹಾಗೂ ಬರ್ಮಾದ ಅಂಚಿನಲ್ಲಿರುವ ಕರೇನ್ ನಿರಾಶ್ರಿತರು, ಭಾರತದಲ್ಲಿ ರೋಹಿನ್‌ಗ್ಯಾ ಮುಸ್ಲಿಂ ಬರ್ಮಿಗಳು, ಪಾಕಿಸ್ತಾನ ಹಾಗೂ ಬಾಂಗ್ಲಾದೇಶದಲ್ಲಿ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಗೆ ಸಾಕಷ್ಟು ನಿದರ್ಶನಗಳಿವೆ.

ಮಿಲಿಟರಿ ವೇಶ್ಯಾವೃತ್ತಿ ಯುದ್ಧದಷ್ಟೇ ಗತ ಇತಿಹಾಸವನ್ನು ಹೊಂದಿದೆ. ಎರಡನೇ ಮಹಾಯುದ್ಧ ಸಂದರ್ಭದಲ್ಲಿ ಜಪಾನಿನ ಸೈನಿಕರನ್ನು ತೃಪ್ತಿಪಡಿಸಲು ಕೊರಿಯಾ ಹಾಗೂ ಫಿಲಿಪೈನ್ಸ್ ದೇಶದಿಂದ ಖುಷಿ ನೀಡುವ ಹೆಂಗಸರನ್ನೂ ಸೇರಿಸಿ ಕೊಳ್ಳಲಾಗುತ್ತಿತ್ತು. ವಿಯಟ್ನಾಂ ಯುದ್ಧದ ಸಂದರ್ಭದಲ್ಲಿ ಫಿಲಿಫಿನೋ ಹಾಗೂ ಥೈ ಹೆಂಗಸರನ್ನು, ಅಮೇರಿಕದ ಬಡ ಯುವ ಸೈನಿಕರನ್ನು ತೃಪ್ತಿಪಡಿಸಲು ಮನೋರಂಜನಾ ಕೇಂದ್ರಗಳಿಗೆ ಸೇರಿಸಿಕೊಳ್ಳಲಾಗುತ್ತಿತ್ತು. ಭಾರತದಲ್ಲಿ ಇಂಗ್ಲೀಷರು ಸೈನಿಕರನ್ನು ತೃಪ್ತಿ ಪಡಿಸಲು "ಕೆಂಪು ಪೇಟೆಯಲ್ಲಿ ಸ್ತ್ರೀಯರನ್ನು ಕೂಡಿ ಹಾಕಲಾಗುತ್ತಿತ್ತು. ಕೆಂಪು ಪೇಟೆಯು ಈ ಹೆಂಗಸರನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳಿಸಲಾಗುತ್ತಿತ್ತಲ್ಲದೆ, ಬ್ರಿಟೀಷ್ ಸೈನಿಕರು ಕೆಂಪು ಕೋಟುಗಳನ್ನು ಹಾಕಿಕೊಳ್ಳುತ್ತಿದ್ದು ದರಿಂದ ಪಟ್ಟಣ ಪ್ರದೇಶದಲ್ಲಿ ಈ ರೀತಿಯ ಕೆಂಪು ದ್ವೀಪಗಳು ಹುಟ್ಟಿಕೊಳ್ಳುವುದಕ್ಕೆ ಕಾರಣವಾಯಿತು. ಮಿಲಿಟರಿ ದಾಳಿಗಿಂತ ಬಲವಾದ ದಾಳಿ ಇಂದು ಕೈಗಾರಿಕೋದ್ಯಮಗಳಲ್ಲಿ ಪ್ರಬಲವಾದ ರಾಷ್ಟ್ರಗಳಿಂದ ನಡೆಯುತ್ತಿದೆ. ಪ್ರವಾಸೋದ್ಯಮ ಇಂದು ಸುಂದರವಾದ ತಾಣಗಳೊಂದಿಗೆ ಸುಂದರವಾದ ಮಹಿಳೆಯರ ಭರವಸೆಯನ್ನು ನೀಡುತ್ತದೆ. ದೊಡ್ಡ ದೊಡ್ಡ ಕಾರ್ಪೋರೇಟ್ ಕಂಪನಿಗಳು ತಮ್ಮ ಉದ್ಯೋಗಿಗಳಿಗೆ ವಿರಾಮ ಹಾಗೂ ಮನೋರಂಜನೆಯನ್ನು ನೀಡುವ ಭರವಸೆಯೊಂದಿಗೆ ಕೆಲಸಗಾರರ ಬಗ್ಗೆ ತನ್ನ ಕಾಳಜಿಯನ್ನು ತೋರಿಸುತ್ತದೆ.

ಸ್ತ್ರೀಯರನ್ನು ವೇಶ್ಯಾವೃತ್ತಿಗೆ ಎಳೆಯುತ್ತಿರುವ ಶಕ್ತಿಗಳನ್ನು, ಕೈಗಾರಿಕೀಕರಣ, ವ್ಯಾಪಾರೀಕರಣ ಹಾಗೂ ಜಾಗತೀಕರಣದಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಸ್ತ್ರೀಯರ ಮೇಲೆ ನಡೆಯುತ್ತಿರುವ ಹಿಂಸೆಗೂ, ಬಡದೇಶಗಳು ತಮ್ಮ ಸಂಪನ್ಮೂಲಗಳನ್ನು ಶ್ರೀಮಂತ ದೇಶಗಳಿಗೆ ಮಾರಿಕೊಂಡು, ಸಂಪೂರ್ಣ ದಿವಾಳಿ ಯಾಗುತ್ತಿರುವುದಕ್ಕೂ ಸಂಬಂಧವಿದೆ. ಭಾರಿ ಕೈಗಾರಿಕೀಕರಣ ಗೊಂಡ ಸಮಾಜದಲ್ಲಿ ಶ್ರೀಮಂತರಿಗೂ, ಬಡವರಿಗೂ ಅಜಗಜಾಂತರ ವ್ಯತ್ಯಾಸವಿದೆ. ಇಲ್ಲಿ ಮಾನವೀಯ ಸಂಬಂಧಗಳಿಗೆ ಯಾವುದೇ ಬೆಲೆ ಇಲ್ಲ. ಪ್ರತಿಯೊಂದು ಹೆಜ್ಜೆಯು ಬೇರು ಕಳೆದುಕೊಂಡ, ಅಮಾನುಷವಾದ, ವ್ಯಕ್ತಿಗತ ಆಸೆಗಳ ಪೂರೈಕೆಗಾಗಿ ಸೀಮಿತಗೊಂಡಿದೆ.

ಇಂತಹ ಸಂದರ್ಭದಲ್ಲಿ ವೇಶ್ಯಾವೃತ್ತಿಯಂತಹ ಅಮಾನುಷವಾದ, ಅಮಾನವೀಯವಾದ ಸಾಂಸ್ಥಿಕ ಬಲೆಯಿಂದ ಮಹಿಳೆಯರ ಹಾಗೂ ಎಳೆಯ ಬಾಲೆಯರ ಕಳೆದುಹೋದ ವ್ಯಕ್ತಿತ್ವವನ್ನು ಪುನಃ ಗಳಿಸುವುದು ಹೇಗೆ? ಕಳೆದುಹೋದ ಘನತೆಯನ್ನು ಹುಡುಕಲು ಹಲವಾರು ಮಾರ್ಗ ಹಾಗೂ ದಾರಿಗಳನ್ನು ಚರ್ಚಿಸಲಾಗುತ್ತದೆ. ವೇಶ್ಯಾವೃತ್ತಿಯ ಚೌಕಟ್ಟಿನಲ್ಲಿರುವ ಹಣೆಪಟ್ಟಿಯನ್ನು ಕಿತ್ತೊಗೆಯುವ ಹಾಗೂ

ಈ ವೃತ್ತಿಯನ್ನು ನಡೆಸುವ ಮಹಿಳೆಯ ಮೇಲೆ ನಡೆಯುತ್ತಿರುವ ಹಿಂಸೆಯನ್ನು ತೊಡೆದುಹಾಕುವುದೇ ಈ ಎಲ್ಲಾ ನಿಲುವುಗಳ ಹಿಂದಿರುವ ಉದ್ದೇಶ.

ಒಂದು ನಿಲುವಿನ ಪ್ರಕಾರ ವೇಶ್ಯಾವೃತ್ತಿಯು ಕಾನೂನು ಸಮ್ಮತವಾದುದು. ಈ ವೃತ್ತಿಯಲ್ಲಿರುವ ಸ್ತ್ರೀಯರು ಬಳಕೆಯಲ್ಲಿರುವ ಕಾರ್ಮಿಕ, ಕ್ರಿಮಿನಲ್ ಹಾಗೂ ಸಿವಿಲ್ ಕಾಯಿದೆಯ ಮೂಲಕ ನ್ಯಾಯವನ್ನು ಪಡೆಯಬಹುದು. ಸ್ತ್ರೀಯರು ಬಲಿಪಶುವಾಗುವುದನ್ನು ತಡೆಯುವ ಉದ್ದೇಶ ಇಲ್ಲಿದೆ. ಬೇರೆ ವೃತ್ತಿಯನ್ನು ಸ್ತ್ರೀಯರು ಆಯ್ಕೆ ಮಾಡಿಕೊಳ್ಳುವಂತೆ ಈ ವೃತ್ತಿಯನ್ನು ಅವರು ಆಯ್ಕೆ ಮಾಡಿಕೊಳ್ಳಬಹುದು. ಈ ವೃತ್ತಿಯಲ್ಲಿ ಈಗಾಗಲೇ ಕೆಲಸ ಮಾಡುತ್ತಿರುವ ಮಹಿಳೆಯರ ವ್ಯಕ್ತಿತ್ವವನ್ನು ಹಾಗೂ ವಾಸ್ತವಿಕ ಪರಿಸ್ಥಿತಿಯನ್ನು ಗುರುತಿಸಬೇಕು.

ವೇಶ್ಯಾವೃತ್ತಿಯು ಕಾನೂನು ಸಮ್ಮತವಾದ ಒಂದು ವೃತ್ತಿಯೇ ಆಗಿದೆ. ಜಗತ್ತಿನಾದ್ಯಂತ ಪುರುಷರು ಹಾಗೂ ಸರ್ಕಾರಗಳು ಈ ವೃತ್ತಿಯಿಂದ ಆದಾಯವನ್ನು ಪಡೆಯುತ್ತಿವೆ. ಹಾಗಾಗಿ ಈ ವೃತ್ತಿಯಲ್ಲಿರುವವರನ್ನು ಕಾರ್ಮಿಕರೆಂದು ಪರಿಗಣಿಸಿ ಅವರ ಮೇಲೆ ನಡೆಯುತ್ತಿರುವ ಕ್ರೂರವಾದ ಹಿಂಸೆಯನ್ನೂ ತಡೆಯುವುದು ಈ ವಾದದ ಉದ್ದೇಶ. ಅವರಿಗೆ ಕಾರ್ಮಿಕ ಹಕ್ಕುಗಳನ್ನು ನೀಡಬೇಕಾಗಿದೆಯೆಂದು ವಾದಿಸಲಾಗುತ್ತಿದೆ.

ಇನ್ನೊಂದು ವಾದವು ವೇಶ್ಯಾವೃತ್ತಿಯನ್ನು ಸ್ತ್ರೀಯರ ಮೇಲೆ ನಡೆಯುತ್ತಿರುವ ಒಂದು ಹಿಂಸೆಯ ವಿಧಾನವೆಂದು ವ್ಯಾಖ್ಯಾನಿಸುತ್ತದೆ. ಸ್ತ್ರೀಯರ ಲೈಂಗಿಕತೆಯನ್ನು ವ್ಯಾಖ್ಯಾನಿಸುವ, ಉಪಯೋಗಿಸಿಕೊಳ್ಳುವ, ಅವಮಾನಿಸುವ, ಎಲ್ಲಾ ಅಂಶಗಳು ನಮ್ಮ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಇವೆಯೆಂದು ಪರಿಗಣಿಸುತ್ತಾರೆ. ಈ ನಿಲುವನ್ನು ಒಪ್ಪುವ ಕೆಲವರು ನೈತಿಕ ಚೌಕಟ್ಟಿನಲ್ಲಿ ವಾದಿಸುತ್ತಾ, ವೇಶ್ಯಾವೃತ್ತಿಯನ್ನು ಸಂಪೂರ್ಣವಾಗಿ ತೊಡೆದುಹಾಕಬೇಕೆಂದು ಭಾವಿಸುತ್ತಾರೆ. ಈ ನಿಲುವನ್ನು ಒಪ್ಪುತ್ತಲೇ ಸ್ವಲ್ಪ ವಿಶಾಲವಾಗಿ ಯೋಚಿಸುವವರು, ವೇಶ್ಯಾವೃತ್ತಿಯಲ್ಲಿನ ಅಮಾನುಷ ಅಂಶಗಳನ್ನು ತೊಡೆದು ಹಾಕುವತ್ತ ಹೆಚ್ಚು ಒತ್ತು ನೀಡಿ ಅದರ ಸುಧಾರಣೆ ಹಾಗೂ ಪುನರ್‌ವಸತಿಗಾಗಿ ಒತ್ತು ನೀಡುತ್ತಾರೆ.

ಇನ್ನೊಂದು ಹಂತದಲ್ಲಿ, ಪುನರ್ವಸತಿ, ಸುಧಾರಣೆ, ಕಾನೂನು ಎಲ್ಲವನ್ನೂ ಒಳಗೊಂಡ ಸರ್ಕಾರಿ ಕಾರ್ಯಕ್ರಮಗಳನ್ನು ಸಹ ನಾವು ನೋಡಬಹುದು. ಸ್ತ್ರೀಯರನ್ನು ಸಂಪೂರ್ಣವಾಗಿ ಬಲಿಪಶು, ಅಪರಾಧಿ ಎಂದು ಪರಿಗಣಿಸುವ ಈ ಸರ್ಕಾರಿ ಕಾರ್ಯಕ್ರಮಗಳು ಸಹ ಸಂಪೂರ್ಣವಾಗಿ ವಿಫಲವಾಗಿರುವುದನ್ನು ನಾವು ಕಾಣಬಹುದು. ಇಂದು ಜಾಗತಿಕ ಮಟ್ಟದಲ್ಲಿ ಏಯ್ಡ್ಸ್ ಭಯದಿಂದಾಗಿ ವೇಶ್ಯಾವೃತ್ತಿಯನ್ನು ಕಾನೂನು ಸಮ್ಮತ ಗೊಳಿಸಬೇಕೆಂಬ ನಿಲುವಿಗೆ ಬಂದಿರುವುದನ್ನು ಕಾಣುತ್ತೇವೆ. ಈ ವೃತ್ತಿಯ ಮೇಲೆ ಈ ಮೂಲಕ ಸಂಪೂರ್ಣ ನಿಯಂತ್ರಣ ಹೊಂದಬಹುದೆಂದು ಭಾವಿಸಲಾಗುತ್ತಿದೆ.

ವೇಶ್ಯಾವೃತ್ತಿಯನ್ನು ಸಂಪೂರ್ಣವಾಗಿ ತೊಡೆದು ಹಾಕಬೇಕೆಂದು ವಾದಿಸುವ ಗುಂಪು ವೇಶ್ಯಾವೃತ್ತಿಯನ್ನು ಕೇವಲ ಪಿತೃಪ್ರಧಾನ ವ್ಯವಸ್ಥೆಯ ಹಿಂಸೆಯ ವಿಧಾನವೆಂದು ಪರಿಗಣಿಸುತ್ತದೆ. ಬದಲಾಗುತ್ತಿರುವ ಸಾಮಾಜಿಕ, ಆರ್ಥಿಕ, ಸನ್ನಿವೇಶದಲ್ಲಿ ವೇಶ್ಯಾವೃತ್ತಿಯ ಸಮಸ್ಯೆಯನ್ನು ವಿಶ್ಲೇಷಿಸುವುದಿಲ್ಲ. ಈ ವಾದವು ಸ್ತ್ರೀಯರನ್ನು ಉತ್ತಮ ಸ್ತ್ರೀಯರು ಹಾಗೂ ಕೆಟ್ಟ ನಡತೆಯ ಸ್ತ್ರೀಯರು ಎಂಬ ಸಂಪ್ರದಾಯಿಕ ವರ್ಗೀಕರಣದ ಮೂಲಕ ಸಂಪ್ರದಾಯಿಕ ಮೌಲ್ಯಗಳನ್ನು ಬಲಪಡಿಸುತ್ತದೆ. ವೇಶ್ಯಾವೃತ್ತಿಯನ್ನು ಒಂದು ಉದ್ದಿಮೆಯೆಂದು ವಾದಿಸುವವರು ಸಮಸ್ಯೆಯ ಜಟಿಲತೆಯ ಬಗ್ಗೆ ಕುರುಡಾಗಿದ್ದಾರೆ.

ಇವರು ಪ್ರಜ್ಞಾಪೂರ್ವಕವಾಗಿ ಜಾಗತೀಕರಣದ ಆರ್ಥಿಕ ಬೆಳವಣಿಗೆಯ ಹಾಗೂ ಅಭಿವೃದ್ಧಿಯ ಮಾನದಂಡಗಳನ್ನು ಒಪ್ಪಿಕೊಳ್ಳುತ್ತಾರೆ. ಈ ಸನ್ನಿವೇಶದಲ್ಲಿ ಸ್ತ್ರೀಯರು ತಮ್ಮ ಹಕ್ಕು ಬಾಧ್ಯತೆ, ಹಾಗೂ ಘನತೆಯನ್ನು ಸಮರ್ಥಿಸಿಕೊಳ್ಳ ಬೇಕಾಗುತ್ತಿದೆಯೆಂದು ವಾದಿಸುತ್ತಾರೆ. ಅಧಿಕ ಲಾಭಕ್ಕಾಗಿ ಸ್ತ್ರೀಯರು ತಮ್ಮ ದೇಹವನ್ನೂ ಮಾರಾಟ ಮಾಡುವ ಹಕ್ಕನ್ನು ಆಯ್ಕೆ ಮಾಡಿಕೊಳ್ಳುವ ಹಕ್ಕನ್ನು ಹೊಂದಿದ್ದಾರೆಂದು ವಾದಿಸಲಾಗುತ್ತಿದೆ. ಶೋಷಣೆ ಮಾಡುವ ಸರ್ಕಾರ ಹಾಗೂ ಹೂರುಕಟ್ಟೆಗೆ ಈ ವಾದವು ವೇಶ್ಯಾವೃತ್ತಿಯನ್ನು ನ್ಯಾಯಸಮ್ಮತ ಗೊಳಿಸುವ ಬೇಡಿಕೆಗೆ ಪೂರಕವಾಗಿಯೇ ಇದೆ.

ವೇಶ್ಯಾವೃತ್ತಿಯನ್ನು ಕೇವಲ ಆಯ್ಕೆ ಎಂದು ಹೇಳುವುದರ ಮೂಲಕ ಅಂತಹ ಸಮಾಜ ಹಾಗೂ ಸಂಸ್ಕೃತಿಯಿಂದ ಬಂದ ಮಹಿಳೆಯರ ಬಡತನದ ನೋವನ್ನು ಗುರುತಿಸುವುದಿಲ್ಲ.

ಈ ಅಮಾನುಷ ಪರಿಸ್ಥಿತಿಯಲ್ಲಿ ಅವರು ಬದುಕಿ ಉಸಿರಾಡಿದರೆ ಅದು ಪ್ರಸ್ತುತ ಸನ್ನಿವೇಷದ ಮರಣಾಂತಿಕ ಹಿಂಸೆಯ ಮೂಕ ಸಾಕ್ಷಿಯಾಗುತ್ತದೆ.

ಈ ಹಿನ್ನೆಲೆಯಲ್ಲಿ ಮೇಲಿನ ನಿಲುವುಗಳು ವೇಶ್ಯಾವೃತ್ತಿಯನ್ನು ಕುರಿತು ಕಾಳಜಿಯನ್ನು ವ್ಯಕ್ತಪಡಿಸಿದರೂ ಭಿನ್ನವಾದ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಸಮಾಜದಲ್ಲಿನ ವೇಶ್ಯಾವೃತ್ತಿಯಲ್ಲಿನ ಮಹಿಳೆಯರ ಸಮಸ್ಯೆಗೆ ಪರಿಹಾರವನ್ನು ಹುಡುಕಲಾರವು. ಈ ಎರಡು ನಿಲುವುಗಳು ನೀಡುವ ಹೊಳಹುಗಳನ್ನು ಗಮನಿಸುತ್ತಾ, ಅಲ್ಪಾವಧಿ ಹಾಗೂ ದೀರ್ಘಾವಧಿ ತಂತ್ರಗಳ ಪರಿಹಾರದ ಮಾರ್ಗವನ್ನೂ ಹುಡುಕಬೇಕಾಗುತ್ತದೆ. ಈ ವೃತ್ತಿಯಲ್ಲಿನ ಮಹಿಳೆಯರ ಮೇಲೆ ನಡೆಯುತ್ತಿರುವ ಅಮಾನುಷ ಹಿಂಸೆಯನ್ನು ತಡೆಯುವ, ದೈಹಿಕ ಬಲಾತ್ಕಾರ, ಹಿಂಸೆ, ಮೋಸ ಮುಂತಾದ ಅಪರಾಧಗಳನ್ನು ಪರಿಣಾಮಕಾರಿಯಾಗಿ ಪ್ರತಿಭಟಿಸಬೇಕಾಗುತ್ತದೆ.

ಅವರ ದೈನಂದಿನ ಜೀವನದಲ್ಲಿ ಭದ್ರತೆಯನ್ನು ಒದಗಿಸುವುದು ಅತ್ಯಗತ್ಯವಾಗುತ್ತದೆ. ಈ ಭದ್ರತೆಗಾಗಿ ನ್ಯಾಯಾಂಗದ ಮೊರೆ ಹೋಗಬೇಕಾಗುತ್ತದೆ. ಉತ್ತಮ ಆರೋಗ್ಯ, ಚಿಕಿತ್ಸೆಯ ಸೌಲಭ್ಯ ಭಾರತದ ಪ್ರತಿಯೊಬ್ಬ ಪ್ರಜೆಯ ಹಕ್ಕಾಗಿರುವುದರಿಂದ ಅದಕ್ಕಾಗಿಯೇ ಹೋರಾಡಬಹುದಾಗಿದೆ.

ಹೀಗಾಗಿ ವೇಶ್ಯಾವೃತ್ತಿಯನ್ನು ಕಾನೂನು ಸಮ್ಮತಗೊಳಿಸುವ ಪ್ರಶ್ನೆ ಅಪ್ರಸ್ತುತವೆನಿಸುತ್ತದೆ. ಕಾನೂನು ಬದ್ಧತೆಗಾಗಿ ನಡೆಸುವ ಹೋರಾಟ ಎಷ್ಟೋ ಬಾರಿ ಮೂಲಭೂತ ಬದಲಾವಣೆಯ ಆಶಯವನ್ನೂ ಹೊಸಕಿ ಹಾಕುವುದನ್ನೂ ನಾವು ನೋಡಿದ್ದೇವೆ. ಹಾಗಾಗಿ ಹೊಸ ಕಾನೂನುಗಳನ್ನು ಕೇಳುವ ಬದಲು ಸ್ತ್ರೀಯರ ಮೇಲೆ ನಡೆಯುವ ಹಿಂಸೆಯನ್ನು ತಡೆಯಲು ಈಗಾಗಲೇ ಇರುವ ಕಾನೂನಿನ ಚೌಕಟ್ಟಿನಲ್ಲಿಯೇ ಹಕ್ಕುಗಳನ್ನು ಸಮರ್ಥಿಸಿಕೊಳ್ಳಬಹುದು.

ವೇಶ್ಯಾವೃತ್ತಿಯಲ್ಲಿರುವ ಸ್ತ್ರೀಯರ ದೈನಂದಿನ ಬದುಕಿನ ಹಕ್ಕು ಬಾಧ್ಯತೆಗಳಿಗಾಗಿ ನಡೆಸುವ ಹೋರಾಟದೊಂದಿಗೆ ಹಿಂಸೆಯ ಸ್ವರೂಪ ಹಾಗೂ ಅಭಿವೃದ್ಧಿ ಇವುಗಳ ನಡುವಿರುವ ಸಂಬಂಧವನ್ನು ಮುರಿದು ಹಾಕುವಲ್ಲಿ ಸಂಘಟಿತರಾಗಿ ಹೋರಾಡಬೇಕಾಗುತ್ತದೆ.

ಮುಖ್ಯವಾಗಿ ವೇಶ್ಯಾವೃತ್ತಿಯಲ್ಲಿನ ಮಹಿಳೆಯರು ಧ್ವನಿ ಎತ್ತಬೇಕಾಗುತ್ತದೆ. ಅಮಾನುಷವಾದ ಶೋಷಿತ ವ್ಯವಸ್ಥೆಯಲ್ಲಿ ಉಸಿರಾಡುವ ಈ ಹೆಣ್ಣು ಮಕ್ಕಳ ದೃಷ್ಟಿಕೋನವೇ ಮುಖ್ಯವಾಗುತ್ತದೆ. ಸಮಾಜದ ದ್ವಿಮುಖ ನೈತಿಕ ಮಾನದಂಡಗಳ ಬಗ್ಗೆ ಅವರ ಮೇಲೆ ನಡೆಯುವ ಹಿಂಸೆಯ ಸ್ವರೂಪದ ಬಗ್ಗೆ, ವೇಶ್ಯಾವೃತ್ತಿಯ ಜಾಲದ ಸಂಕೀರ್ಣತೆಯ ಬಗ್ಗೆ, ನ್ಯಾಯಾಂಗ ವ್ಯವಸ್ಥೆಯ ಟೊಳ್ಳುತನದ ಬಗ್ಗೆ ಅವರು ದನಿ ಎತ್ತಿ ಮಾತನಾಡಬೇಕಾಗುತ್ತದೆ. ಅವರ ಒಳನೋಟಗಳೇ ಅವರ ಹಕ್ಕು ಬಾಧ್ಯತೆಯ ಸಮರ್ಥನೆಗೆ ಸರಿಯಾದ ಮಾರ್ಗಗಳು.

ನಮ್ಮ ಸಮಾಜದ ತಿರಸ್ಕಾರಕ್ಕೆ ಒಳಗಾದ ಈ ಮಹಿಳೆಯರು ಅವರದೇ ಜಗತ್ತಿನ ಸೃಷ್ಟಿಗಾಗಿ ಮಾತನಾಡುವ ಧೈರ್ಯ ಹಾಗೂ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಸಮಾಜಕ್ಕೆ ಅವರು ಹಾಗೂ ಅವರ ಮಕ್ಕಳು ನೀಡುವ ಕೊಡುಗೆಯು ಮುಖ್ಯವಾಗುತ್ತದೆ. ಅದರ ನೋವುಗಳು ಮಾತ್ರವಲ್ಲ, ಅವರ ಕನಸುಗಳು ಸಹ ನಮ್ಮ ಸಮಾಜಕ್ಕೆ ಅಗತ್ಯವಾಗಿದೆ.

*ಆಧಾರ : ಏಷಿಯನ್ ವಿಮೆನ್ ಹ್ಯೂಮನ್ ರೈಟ್ಸ್ ಕೌನ್ಸಿಲ್.*

ಒಂದು ಅಂದಾಜಿನ ಪ್ರಕಾರ 1993ರಿಂದ 1999ರವರೆಗೆ ಮುಚ್ಚಿರುವ ರೋಗಗ್ರಸ್ತ ಸರ್ಕಾರಿ ಸ್ವಾಮ್ಯದ ಉದ್ದಿಮೆಗಳ ಸುಮಾರು ಎರಡು ಲಕ್ಷ ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ.

ಭಾರತದಲ್ಲಿ ಸರ್ಕಾರಿ - ಖಾಸಗಿ ಎರಡೂ ಸ್ವಾಮ್ಯದ ಸುಮಾರು ನಾಲ್ಕು ಲಕ್ಷ ಕಾರ್ಖಾನೆಗಳು ಮುಚ್ಚಿವೆ. ಇದರಲ್ಲಿ ಸಣ್ಣ, ಮಧ್ಯಮ ಹಾಗೂ ಬೃಹತ್ ಕಾರ್ಖಾನೆಗಳೂ ಸೇರಿವೆ. ಮುಂದಿನ ಹತ್ತು ವರ್ಷಗಳಲ್ಲಿ ಆರ್ಥಿಕ ರಾಜಕೀಯ ಸ್ವಾತಂತ್ರ್ಯ ಕಳೆದುಕೊಂಡು ನಾವು ಮತ್ತೊಮ್ಮೆ ವಸಾಹತುಶಾಹಿ ಗುಲಾಮಗಿರಿಗೆ ಸಿಕ್ಕಿಕೊಂಡರೂ ಅಚ್ಚರಿಪಡಬೇಕಾಗಿಲ್ಲ.

*ಅನಂತ ಸುಬ್ಬರಾವ್* (ಸಿಪಿಐ ನಾಯಕರು)

# ಬಡತನದ ಬೇಗೆ ಹುಟ್ಟಿಸುವ ದುಬೈ ಕನಸು

ದುಬೈಗೆ ಹೋಗುವ ಕನಸಿನಿಂದಾಗಿ ದುರ್ಗಾ ಬಡತನದ ಬೇಗೆಯನ್ನು ಸಹಿಸುತ್ತಲೇ ಬಂದಳು. ಅವಳ ಕನಸು ನನಸಾಗುವ ಸಮಯ ಬಂದಿತು. ತನ್ನ ಕನಸುಗಳನ್ನು ನನಸು ಮಾಡಲು ಕಷ್ಟಪಟ್ಟು 15,000 ರೂಗಳನ್ನು ಹೊಂದಿಸಿದ್ದಳು. ವಿಸಾ ಸಂಗ್ರಹಿಸಲು ಏಜೆಂಟ್‌ನೊಂದಿಗೆ ದೆಹಲಿಗೆ ಬಂದಾಗ ದುರ್ಗಾಳ ಕನಸುಗಳು ನುಜ್ಜು ಗುಜ್ಜಾದವು.

ಅವಳಿಗೆ ವಿಸಾ ದೊರಕಿಸಿ ಕೊಡುವುದಾಗಿ ಭರವಸೆ ನೀಡಿದ್ದ ಹನೀಫ್. ಆದರೆ ಅವಳ ನಿರೀಕ್ಷೆ ಸುಳ್ಳಾಯಿತು. ಅವಳನ್ನು ಕರೆದುಕೊಂಡು ಬಂದ ಏಜೆಂಟ್, ಇಬ್ಬರು ಮಹಿಳೆಯರೊಂದಿಗೆ ಅವಳನ್ನು ಮಾರಾಟ ಮಾಡುವ ಯೋಜನೆಯನ್ನು ಹಾಕಿಕೊಂಡಿದ್ದ. ಅವಳನ್ನು ವೇಶ್ಯಾವೃತ್ತಿಗೆ ತೊಡಗಿಸಲು ಮಾತುಕತೆಯಾಗಿದ್ದು, ಆ ಯೋಜನೆಯು ಕಾರ್ಯಗತವಾಗುವ ಮೊದಲು ಪೊಲೀಸರಿಗೆ ಸುಳಿವು ಸಿಕ್ಕಿತು. ಅವರಿದ್ದ ಹೋಟೆಲ್‌ನ ಮೇಲೆ ದಾಳಿ ಮಾಡಲಾಯಿತು.

ನೇಪಾಳದಲ್ಲಿ ಹೆಣ್ಣು ಮಕ್ಕಳನ್ನು ಗಲ್ಫ್ ದೇಶಗಳಿಗೆ ಕಳಿಸುವ ವ್ಯಾಪಾರ ದಿನದಿಂದ ದಿನಕ್ಕೆ ಬೆಳೆಯುತ್ತಿದೆ. ಈ ವ್ಯಾಪಾರಕ್ಕೆ ಭಾರತದ ಏಜೆಂಟರು ನೆರವಾಗುತ್ತಾರೆ. ಇವರು ಕಠ್‌ಮಂಡುವಿನಲ್ಲಿ ಗಲ್ಫ್ ದೇಶಗಳಿಗೆ ಹೋಗಲು ಬಯಸುವವರನ್ನು ಆಯ್ಕೆ ಮಾಡುತ್ತಾರೆ. ಆಯ್ಕೆಯಾದವರಿಂದ 25,000 ರೂ. ಸಂಗ್ರಹಿಸುತ್ತಾರೆ. ಹೀಗೆ ಆಯ್ಕೆಯಾದವರಲ್ಲಿ 130 ಜನ ಹೆಣ್ಣು ಮಕ್ಕಳಿದ್ದರು. ವಿಸಾ ಮುಂತಾದವುಗಳಿಗಾಗಿ, ಹುಡುಗಿಯರನ್ನು ದೆಹಲಿ ಹಾಗೂ ಮುಂಬಯಿಗೆ ಕರೆದುಕೊಂಡು ಬರುತ್ತಾರೆ.

ಹೀಗೆ ಕರೆದುಕೊಂಡು ಬಂದ ಬಹಳಷ್ಟು ಮಹಿಳೆಯರು ಕೆಂಪುದ್ವೀಪವನ್ನು ಸೇರುತ್ತಾರೆ. ಹೇಗೋ ದುಬೈಯನ್ನು ತಲುಪಿದವರು, ಮನೆಗೆಲಸದ ಕೆಲಸವನ್ನೂ ಪಡೆದರೂ, ಅಲ್ಲಿಯೂ ಲೈಂಗಿಕ ಶೋಷಣೆಗೆ ಒಳಗಾಗುತ್ತಾರೆ.

ಕಾನಿಶರ್ಮಾಳದು ಇದೇ ಕತೆ. ಐದು ತಿಂಗಳ ಹಿಂದೆ ಕುವೈತ್‌ಗೆ ಬಂದ ಕಾನಿ ಇಂದು ಕೈಕಾಲು ಮುರಿದುಕೊಂಡು ಹಾಸಿಗೆಯ ಮೇಲೆ ನರಳುತ್ತಿದ್ದಾಳೆ. ಕುವೈತ್‌ನ ಕುಟುಂಬವೊಂದರಲ್ಲಿ ಮನೆಗೆಲಸ ಮಾಡುತ್ತಿದ್ದ ಆಕೆಯನ್ನು ಯಜಮಾನನ ಮಗ ಅವಳ ಮೇಲೆ ಅತ್ಯಾಚಾರವೆಸಗುತ್ತಿದ್ದ. ಆಕೆ ಯಜಮಾನನಿಗೆ ದೂರು ನೀಡಿದಾಗ ಆಕೆಯನ್ನು ಮೂರನೇ ಮಹಡಿಯಿಂದ ತಳ್ಳಲಾಯಿತು.

ದೆಹಲಿಯ ಏಜೆಂಟರೊಬ್ಬರ ನೆರವಿನಿಂದ ಕಾನಿ ದುಬೈಯನ್ನು ತಲುಪಿದ್ದು ಅವಳು ತನ್ನ ನಾಲ್ಕು ಮಕ್ಕಳನ್ನು ಹಾಗೂ ಗಂಡನನ್ನು ಪೋಷಿಸಬೇಕಾಗಿತ್ತು. ಅವಳು ತನ್ನ ಮೇಲೆ ನಡೆಯುತ್ತಿದ್ದ ಅನ್ಯಾಯವನ್ನು ಸಹಿಸಲಾರದೇ, ವಾಪಸ್ಸು ಬರಲು ಪ್ರಯತ್ನಿಸಿದಳು. ಅಲ್ಲಿರುವ ಸಂಘಟನೆಯೊಂದರ ನೆರವಿನಿಂದ ಕಠ್‌ಮಂಡುವಿನ ಅಧಿಕಾರಿಗಳು ಕುವೈತ್‌ನ ಅಧಿಕಾರಿಗಳೊಂದಿಗೆ ಮಾತನಾಡುವಂತೆ ಒತ್ತಡವನ್ನು ಹೇರಿದಳು. ಆದರೆ ಸರ್ಕಾರ ಕ್ರಮ ತೆಗೆದುಕೊಳ್ಳುವ ಮೊದಲೇ ಕಾನಿ ಈ ಲೋಕವನ್ನು ತ್ಯಜಿಸಿದಳು. ಅವಳ ದೇಹವನ್ನು ವಾಪಸ್ಸು ಕಳಿಸಲಾಯಿತು. ದುರ್ಗಾ ಅದೃಷ್ಟವಂತಳಾಗಿದ್ದಳು. ದುರ್ಗಾಳ ತಂದೆ ಅವಳು ಕಾಣೆಯಾದ ಕೂಡಲೇ ಪೋಲೀಸರಿಗೆ ದೂರನ್ನು ನೀಡಿದ. ದುರ್ಗಾ ನೀಡಿದ ಹೇಳಿಕೆಯ ಆಧಾರದ ಮೇಲೆ ಅವಳನ್ನು ಮಾರಾಟ ಮಾಡಲು ಪ್ರಯತ್ನಿಸಿದವರನ್ನು ಬಂಧಿಸಲಾಯಿತು.

ಹುಡುಗಿಯರನ್ನು ಸೆಳೆಯುವ ಜಾಲ ನೇಪಾಳದಲ್ಲಿ ವ್ಯವಸ್ಥಿತವಾಗಿ ಬೆಳೆದಿದೆ. ಈ ಜಾಲದ ಮೂಲಕ ಹುಡುಗಿಯರನ್ನು ಗಲ್ಫ್ ದೇಶಗಳಿಗೆ ಹೋಗಲು ಪ್ರೋತ್ಸಾಹ ನೀಡಲಾಗುತ್ತದೆ. 35 ವರ್ಷ ವಯಸ್ಸಿಗಿಂತ ಕಡಿಮೆ ವಯಸ್ಸಿನ ಹೆಣ್ಣುಮಕ್ಕಳು ಗಲ್ಫ್ ದೇಶಕ್ಕೆ ಹೋಗುವುದನ್ನು ನಿಷೇಧಿಸಲಾಗಿದ್ದರೂ, ಹುಡುಗಿಯರು ಈ ಜಾಲದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾರೆ. ಕಮಲಾ ಆರು ತಿಂಗಳ ಕಾಲ ಗಲ್ಫ್ ದೇಶದಲ್ಲಿದ್ದು, ಲೈಂಗಿಕವಾಗಿ ಹಿಂಸೆಗೊಳಗಾಗಿ ತನ್ನ ಮಾನಸಿಕ ಸ್ವಾಸ್ಥ್ಯವನ್ನು ಕಳೆದುಕೊಂಡಳು.

ನೇಪಾಳಿ ಪೊಲೀಸರು ಗಡಿ ಪ್ರದೇಶದಲ್ಲಿ ಕಟ್ಟೆಚ್ಚರವನ್ನು ಇಟ್ಟಿರುತ್ತಾರೆ. ಗಡಿ ಪ್ರದೇಶಗಳಲ್ಲಿ ಕಣ್ಣುತಪ್ಪಿಸಿ ಹುಡುಗಿಯರನ್ನು ದೆಹಲಿಗೆ ಕರೆದುಕೊಂಡು ಬರಲಾಗುತ್ತದೆ. ವಿಸಾ, ನೆಪದಿಂದ ದೆಹಲಿಗೆ ಕರೆ ತಂದು ವೇಶ್ಯಾವಾಟಿಕೆಗೆ ಮಾರಲಾಗುತ್ತದೆ. ಹೀಗೆ ಕರೆತಂದ ಮಹಿಳೆಯರು ಅಮಾನುಷವಾದ ಲೈಂಗಿಕ ಹಿಂಸೆಗೆ ಒಳಗಾಗುತ್ತಾರೆ.

ಇಂತಹ ಹಿಂಸೆಗೆ ಒಳಗಾದವರಲ್ಲಿ ಸಾನು ಸಹ ಒಬ್ಬಳು. ಕುವೈತ್‌ನಲ್ಲಿ ಕೆಲಸ ಕೊಡಿಸುವುದಾಗಿ ಏಜೆಂಟನೊಬ್ಬ ಅವಳಿಗೆ ಭರವಸೆ ನೀಡಿದ್ದ. ಅವನ ಭರವಸೆಯಂತೆ ಆಕೆ ಕುವೈತ್‌ನ್ನು ತಲುಪಿದ್ದಳು. ಅಲ್ಲಿ ಅವಳನ್ನು ರೂಮಿನಲ್ಲಿ ಕೂಡಿ ಹಾಕಲಾಗುತ್ತಿತ್ತು. ಯಜಮಾನ ಹಾಗೂ ಅವನ ಸ್ನೇಹಿತರೊಂದಿಗೆ ಆಕೆ ಮಲಗಬೇಕಾಗಿತ್ತು. ಒಂದು ದಿನಕ್ಕೆ ಕೊನೆಯ ಪಕ್ಷ 20 ಜನರೊಂದಿಗಾದರೂ ಅವಳು ಮಲಗ ಬೇಕಾಗಿತ್ತು. ಈ ಸತ್ಯವನ್ನು ನಾನು ಬೇರೆಯವರಿಗೆ ಹೇಳಲೇ ಬೇಕು. ಹೀಗಾದರೂ ನನ್ನ ಅಕ್ಕ ತಂಗಿಯರು ನಾನು ಅನುಭವಿಸಿದ ಈ ಕಷ್ಟವನ್ನು ಅನುಭವಿಸಬಾರದು ಎಂಬುದು ಅವಳ ಇಚ್ಛೆ.

ನೇಪಾಳದ ಪಾಲ್‌ಚೌಕದಲ್ಲಿ ಶ್ರೀ ಭೈರವೇಶ್ವರ ದೇವಸ್ಥಾನವಿದೆ. ಪ್ರತಿ ಶನಿವಾರ ಇಲ್ಲಿ ನಡೆಯುವ ವಿಶೇಷ ಪೂಜೆಯನ್ನು ನೆರವೇರಿಸಲು ವಿಶೇಷವಾಗಿ ಹೆಣ್ಣು ಮಕ್ಕಳು ಬರುತ್ತಾರೆ. ಹೀಗೆ ಬರುವವರಲ್ಲಿ ಬಹುಪಾಲು ಹೆಣ್ಣು ಮಕ್ಕಳು ಮುಂಬೈನ ವೇಶ್ಯಾವಾಟಿಕೆಯವರು.

ನೇಪಾಳದ ಹೆಣ್ಣುಮಕ್ಕಳನ್ನು ಭಾರತದ ವೇಶ್ಯಾವಾಟಿಕೆಗೆ ಉದ್ಯೋಗಕ್ಕಾಗಿ ಗಲ್ಫ್ ದೇಶಗಳಿಗೆ ಬಡತನದ ಕಾರಣದಿಂದ ಕಳಿಸುತ್ತಾರೆ. ಹಳ್ಳಿಗಳಲ್ಲಿನ ನಿರಕ್ಷರತೆ, ಬಡತನ, ವಿದ್ಯುಚ್ಛಕ್ತಿ ಅಭಾವ, ವ್ಯವಸಾಯ ಮಾಡಲು ನೀರಾವರಿಯ ಕೊರತೆ, ಮುಂತಾದ ಅಲ್ಲಿಯ ಜ್ವಲಂತ ಸಮಸ್ಯೆಗಳಿಂದಾಗಿ, ಜನರು ಬಡತನದ ಬವಣೆಯಿಂದ ನರಳುತ್ತಾರೆ. ಇಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಅಧಿಕವಾಗಿದೆ. ಕೆಲವು ಹಳ್ಳಿಗಳಲ್ಲಿ ಉತ್ತಮವಾದ ಮನೆಗಳನ್ನು ಕಾಣಬಹುದಾದರೆ, ಅದು ಭಾರತದ ವೇಶ್ಯಾವಾಟಿಕೆಯಿಂದ ಬಂದ ಆದಾಯವೆಂದು ಸುಲಭವಾಗಿ ಹೇಳಬಹುದು. ಸಿಂದಪಾಲ್‌ಚೌಕ, ರಸೂವಾ, ನವಕೋಟ್ ಮುಂತಾದ ಜಿಲ್ಲೆಗಳಲ್ಲಿ ಇದು ಕಣ್ಣಿಗೆ ರಾಚುವಂತಿದೆ.

ಈ ಹಳ್ಳಿಗಳಲ್ಲಿ ಹುಡುಗಿಯರನ್ನು ಭಾರತಕ್ಕೆ ಕಳಿಸುವ ಏಜೆಂಟರನ್ನು ದಾದಾ ಎಂದು ಕರೆಯುತ್ತಾರೆ. ಈ ಹುಡುಗಿಯರು ಹೇಗೆ ಹಣ ಸಂಪಾದನೆ ಮಾಡುತ್ತಾರೆಂದು ತಂದೆ-ತಾಯಿಯರಿಗೆ ಗೊತ್ತಿರುತ್ತದೆ. ಆದರೆ ಯಾರೂ ಮುಕ್ತವಾಗಿ ಮಾತನಾಡುವುದಿಲ್ಲ. ಈ ವ್ಯಾಪಾರವನ್ನು ತಡೆಗಟ್ಟಲು ಸ್ಥಳೀಯ ಜನರು ಕೆಲವು ಸಮಿತಿಗಳನ್ನು ಮಾಡಿಕೊಂಡಿರುವರು. ಆದರೆ ಕೆಲವೊಮ್ಮೆ ಏಜೆಂಟರು, ಇವರಿಗೆ ಲಂಚ ನೀಡುತ್ತಾರೆ, ಇಲ್ಲವೆ ಹೆದರಿಸುತ್ತಾರೆ.

ತಂದೆ ತಾಯಂದಿರು ತಮ್ಮ ಹೆಣ್ಣು ಮಕ್ಕಳು ಕಾಣೆಯಾಗುವುದನ್ನು ಪೊಲೀಸರಿಗೆ ತಿಳಿಸುವುದೇ ಇಲ್ಲ. ಮಗಳಿಗೆ ಗಡಿಯನ್ನು ದಾಟಲು ಸಾಕಷ್ಟು ಸಮಯ ನೀಡಿದ ನಂತರ ಪೊಲೀಸರಿಗೆ ತಿಳಿಸುತ್ತಾರೆ. ಗಡಿ ದಾಟುವಾಗ ಸಿಕ್ಕಿ ಹಾಕಿಕೊಂಡವರೆಲ್ಲಾ ಒಂದೇ ಕತೆಯನ್ನು ಹೇಳುತ್ತಾರೆ. ತಮಗೆ ಯಾರೋ ಸಿಹಿ ಕೊಟ್ಟರು, ಅದನ್ನು ತಿಂದ ತಕ್ಷಣ ಏನಾಯಿತೆಂದು ಗೊತ್ತಿಲ್ಲ, ಎಚ್ಚರವಾದಾಗ ನಾನು ಭಾರತದ ಬಸ್ಸಿನಲ್ಲಿದ್ದೆ ಎಂದು ಹೇಳುತ್ತಾರೆ.

ಬಹಳಷ್ಟು ಹೆಣ್ಣು ಮಕ್ಕಳನ್ನು ಅವರ ಕುಟುಂಬದವರೇ ಕಳಿಸುತ್ತಾರೆ. ಹೀಗೆ ಬಂದ ಕೆಲವು ಮಹಿಳೆಯರು ಏಜೆಂಟರಾಗಿ ಕೆಲಸ ಮಾಡುತ್ತಾರೆ. ಅವರಲ್ಲಿ ನಿಶಾ ಸಹ ಒಬ್ಬಳು. ತಿಂಗಳಿಗೆ 10 ಸಾವಿರ ರೂ. ಸಂಪಾದಿಸುವ ನಿಶಾ ವರ್ಷಕ್ಕೊಮ್ಮೆ ಹಳ್ಳಿಗೆ ಭೇಟಿ ನೀಡಿ ಬೇರೆ ಹುಡುಗಿಯರನ್ನು ಕರೆದು ತರುತ್ತಾಳೆ.

ಹಳ್ಳಿಗೆ ವಾಪಸ್ಸು ಹೋಗಲು ನಿಶಾ ಬಯಸುವುದಿಲ್ಲ. ಇಲ್ಲಿ ಮನೆ, ಟಿ.ವಿ. ಇದೆ. ಚೆನ್ನಾಗಿ ಜೀವನ ಮಾಡುತ್ತಿದ್ದೇನೆ. ಅಲ್ಲಿ ಹೋಗಿ ಏನು ಮಾಡಲಿ ಎಂದು ಮರು ಪ್ರಶ್ನೆ ಹಾಕುತ್ತಾಳೆ.

*ಕೃಪೆ : ದಿ ವೀಕ್*

# ಹೊಟ್ಟೆ ತುಂಬಿದೋರು ಯಾರು ಇಲ್ಲಿಗೆ ಬರಲ್ಲ

*ಸಿನಿಮಾದಲ್ಲಿ ನಾಯಕಿಯದೋ, ನಾಯಕನದೋ ಹುಟ್ಟು ಹಬ್ಬ, ಮೇಣದ ಬತ್ತಿ ಆರಿಸಿ ಕೇಕ್ ಕತ್ತರಿಸಿದ ಕೂಡಲೆ ಹ್ಯಾಪಿ ಬರ್ತಡೆ ಎಂದು ಚಪ್ಪಾಳೆ ತಟ್ಟುತ್ತಾರೆ ಸುತ್ತಲಿದ್ದವರು. ಮದುವೆ ದೃಶ್ಯವೋ, ಹಬ್ಬದ ದೃಶ್ಯವೋ ನಾಯಕಿ ನಾಯಕನ ಸುತ್ತ ಜನರ ಗುಂಪು ನೆರೆದಿರುತ್ತದೆ ಶುಭ ಕೋರಲು.*

*ಹಾಡಿನ ದೃಶ್ಯದಲ್ಲಂತು ಹೀರೋ, ಹಿರೋಯಿನ್ ಹಿಂಭಾಗದಲ್ಲಂತು Back dropನಂತೆ ಹುಡುಗಿಯರು ಇರಲೇಬೇಕು.*

*ವಿಲನ್‌ನ ಅಕ್ಕ, ಪಕ್ಕ, ಹಿಂದೆ, ಮುಂದೆ ತುಂಡು ಬಟ್ಟೆಯಲ್ಲಿ ಅವನ ಮೈ ಒತ್ತುತ್ತಲೋ, ದ್ರಾಕ್ಷಿ ಬಾಯಿಗಿಡುತ್ತಲೋ ಹುಡುಗಿಯರು ಇರಲೇಬೇಕು.*

*ಹೀಗೆ ಹೀರೋ, ಹಿರೋಯಿನ್, ವಿಲನ್‌ನ ಸುತ್ತಮುತ್ತಲು ಗುಂಪಾಗಿದ್ದು ಚದುರಿ ಹೋಗುತ್ತಾರೆ ಹೊಟ್ಟೆಪಾಡಿಗೆ, ನಾಲ್ಕು ಕಾಸಿನ ಸಂಪಾದನೆಗಾಗಿ, ಎಕ್ಸ್‌ಟ್ರಾಗಳೆಂದು ಕರೆಸಿಕೊಳ್ಳುವ ಸಹಕಲಾವಿದರು. 2000ಕ್ಕೂ ಹೆಚ್ಚಿನ ಸಂಖ್ಯೆಯಲ್ಲಿರುವ ಸಹಕಲಾವಿದರಲ್ಲಿ ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಯಾವ ಸೌಲಭ್ಯ, ಸವಲತ್ತು, ರಕ್ಷಣೆಗಳಿಲ್ಲದ ಸಹ ಕಲಾವಿದರು ತಮ್ಮ ಹಕ್ಕುಗಳಿಗಾಗಿ ಸಂಘಟಿತರಾಗಿದ್ದಾರೆ. ಇನ್ನೂ ದೂರವಾಗಿರುವ ಹಕ್ಕುಗಳಿಗಾಗಿ ಹೋರಾಡುತ್ತಲೇ ಇದ್ದಾರೆ. ಮಹಿಳೆಯರದೆ ಸಂಘಟನೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವ ಕೆಲವು ಮಹಿಳಾ ಸಹಕಲಾವಿದರನ್ನು 'ಮಾನಸ' ಭೇಟಿಯಾಗಿ ಮಾತನಾಡಿಸಿದ್ವನ್ನ ಅವರದೇ ಮಾತುಗಳಲ್ಲಿ ಓದುಗರಿಗಾಗಿ ಪ್ರಕಟಿಸಿದ್ದೇವೆ.*

ಸರೋಜ ಶೆಟ್ಟಿ (ಅಧ್ಯಕ್ಷರು) - ನಾನು ಸುಮಾರು 27-28 ವರ್ಷದಿಂದ ಸಿನಿಮಾದಲ್ಲಿ ಇದ್ದೀನಿ. ಸುಮಾರು 150 ಸಿನಿಮಾದಲ್ಲಿ ತಾಯಿ, ಡಾಕ್ಟರ್, ಲಾಯರ್ ಇತ್ಯಾದಿ ಪಾತ್ರ ಮಾಡಿದೀನಿ. ನಾನು ಮೊದಲು ಬಂದಾಗಿಂತಲೂ ಪೇಮೆಂಟ್ ವಿಷಯದಲ್ಲಿ ಈಗ ಸ್ವಲ್ಪ ಪರವಾಗಿಲ್ಲ. ೫೦ ರಿಂದ ೭೦ ರೂ.ವರೆಗೆ ಸಿಗುತ್ತೆ. ಹೆಚ್ಚಿನ Payment ಬೇಕು ಅಂತ ಕೇಳೋಕೆ ಸಾಧ್ಯವಾಗಿದ್ದು ಯೂನಿಯನ್ ಆದ್ಮೇಲೆ. ಸಹಕಲಾವಿದರಲ್ಲಿ ಎ, ಬಿ, ಸಿ ಅಂತ ಇರುತ್ತೆ A (ಸ್ವಿಮಿಂಗ್ ಡ್ರೆಸ್, ಸೆಕ್ಸಿ ಸೀನು)ನವರಿಗೆ 85 ರೂಪಾಯಿವರೆಗೂ ಸಿಗುತ್ತೆ, B (ಕಡಿಮೆ ಗುಂಪು, ನಾಯಕಿಯ ಗೆಳತಿಯರು)ನವರಿಗೆ 70ರಿಂದ 75 ರೂ. ಸಿಕ್ರೆ, ಸಿ (ಮದುವೆ ಸೀನಿನಂತಹ ದೊಡ್ಡ ಗುಂಪು)ನವರಿಗೆ 65ರವರೆಗೂ ಸಿಗುತ್ತೆ. ಮೊದ್ಲು ನಾವು ಒಕ್ಕೂಟದಲ್ಲಿದ್ದಾಗ (ಚಲನಚಿತ್ರ ಕಾರ್ಮಿಕರ ಒಕ್ಕೂಟ) ಎಲ್ಲ ಚೆನ್ನಾಗಿತ್ತು. ಪೇಮೆಂಟು ನೇರವಾಗಿ ನಾವೇ ತಗೊಳ್ಳು ಹಂಗಿತ್ತು. ಐಡೆಂಟಿಟಿ ಕಾರ್ಡ್ ಕೊಟ್ಟಿದ್ರು. ಏಜೆಂಟರುಗಳ ತಕರಾರ್‌ನಿಂದ ನಮ್ಮನ್ನು ಒಕ್ಕೂಟದಿಂದ ಈಚೆ ಹಾಕಿದ್ರು. ಹೆಚ್ಗೆ ಕಮಿಷನ್ ಸಿಗೋಲ್ಲ ಅನ್ನೋದಕ್ಕೆ ಏಜೆಂಟರುಗಳು ಕಿಪಾಪತಿ ಮಾಡಿದ್ರು. ನಾವು ನಮ್ಮ ಮಹಿಳಾ ಸಂಘದಿಂದ ಮಹಿಳೆಯರನ್ನು ಏಜೆಂಟ್ರು ಮಾಡಿ ಅಂತ ಕೇಳ್ತಾ ಇದೀವಿ. ಇದ್ರಿಂದ ಹೆಂಗಸ್ರಿಗೆ ಹೆಚ್ಗೆ ಉಪಯೋಗ ಆಗುತ್ತೆ. ಗಂಡಸ್ರು ಏಜೆಂಟ್ರಾದ್ರೆ ಶೂಟಿಂಗ್ ಮುಗಿದ್ ಮೇಲೆ Producerಗಳು ನಮ್ಮನ್ನೆಲ್ಲ ಕರ್ಕೊಂಡ್ ಹೋಗಿ-ಭಿಡಿ ಅಂತ ಏಜೆಂಟ್ರುಗಳಿಗೆ ಹೇಳ್ತಾರೆ. ಹೂಂ ಅಂದು ಎಲ್ಲಾದ್ರು ಬಿಟ್ಟು ನೀವೇ ಹೋಗಿ ಅಂದ್‌ಬಿಡ್ತಾರೆ. ಅದೇ ಹೆಂಗಸ್ರೆ ಏಜೆಂಟಾಗಿದ್ರೆ ನಾವು ಹೆಂಗಸ್ರು ಸಾರ್, ಎಲ್ಲರನ್ನು ಮನೆ ತಲುಪ್ಸಕ್ಕೆ ಕಷ್ಟ ಅಂದ್ರೆ ಅವರು ಬೇರೆ ವ್ಯವಸ್ಥೆ ಮಾಡಬಹುದು. ಏಜೆಂಟ್ರು ಹೆಂಗಸ್ರಾಗಿದ್ರೆ ಹೆಣ್‌ಮಕ್ಳಿಗೆ ಒಳ್ಳೆದು. ಯಾಕೆಂದ್ರೆ ಹೆಂಗಸ್ರು ತೊಂದ್ರೇನಾ ಹೆಂಗಸ್ರೆ ಚೆನ್ನಾಗಿ ಅರ್ಥ ಮಾಡಿಕೋತಾರೆ. ಈಗಾಗ್ಲೆ ಮೈಸೂರಿನಲ್ಲಿ ಇಬ್ರು ಹೆಂಗಸ್ರು ಏಜೆಂಟಾಗಿದಾರೆ. ಚೆನ್ನಾಗೂ ನಡೆಸ್ತಾ ಇದ್ದಾರೆ. ಅದೆ ತರ ನಮ್ಮಲ್ಲೂ ಬೇಕು ಅಂತ ಕೇಳ್ತಾ ಇದೀವಿ.

ಸಿನಿಮಾ fieldನಲ್ಲಿರೋದು ಸುಲಭ ಏನಲ್ಲ. ಇಷ್ಟು ವರ್ಷದಿಂದ ಇಲ್ಲಿದೀನಿ. ಸೀನಿಯರ್ ಆರ್ಟಿಸ್ಟ್ ಅಂತ ಗೌರವ ಇದೆ. ನನ್ನು ಮೊದ್ಲೆಲ್ಲ ಕಾಟ ಇರೋದು. ಸ್ವಲ್ಪ ಜೋರಾಗಿದ್ರೆ ಹೆದ್ರುಸೋಕೆ ನೋಡ್ತರೆ. ಒಂದ್ಸಲ ನನ್ ಬಗ್ಗೆ ಕೆಟ್‌ದಾಗಿ ಪಾಂಪ್ಲೆಟ್ ಬರ್ದು ಗಾಂಧಿನಗರದಲ್ಲೆಲ್ಲ ಅಂಟಿಸಿದ್ರು. ರೌಡಿಗಳ್ನ ಬಿಟ್ಟು ಹೊಡೆಸ್ತೀವಿ, ಆಸಿಡ್ ಹಾಕಿಸ್ತೀವಿ ಅಂತೆಲ್ಲ ಹೇಳಿದ್ರು, ಯಾರ್‍ಯಾರ್ ಜೊತೇಲೋ ಸಂಬಂಧ ಕಟ್ಟೋದು, ಅವರತ್ರ ಮಲ್ಕೋತೀಯಾ ಅಂತ ಪ್ರಚಾರ ಮಾಡೋದು, ಇಂತವೆಲ್ಲ ಇರ್ತವೆ. ನಾವ್ ಕೇರ್ ಮಾಡ್ದೆ ಧೈರ್ಯವಾಗಿ ಇರ್ಬೇಕು.

ರಾಧ : 13 ವರ್ಷದಿಂದ ಸಿನಿಮಾ fieldನಲ್ಲಿ ಇದೀನಿ. ಗಂಡ Post-officeನಲ್ಲಿ ಕೆಲ್ಸ ಮಾಡ್ತರೆ. ಗಂಡಂಗೆ 2 ಸಂಸಾರ. ನಾನು ಎರಡ್ನೇದಾಗಿರುವವಳು. ಅವರಿಗೆ ಮೊದಲ್ನೆ ಹೆಂಡ್ತಿ ಇದ್ದಾಳೆ ಅಂತ ಮದ್ವೆ ಆದ್ಮೇಲೆ ಗೊತ್ತಾಯ್ತು. ಏನ್ಮಾಡೋದು, ಬಿಡಕಾಗಲ್ವಲ್ಲ. 2 ಸಂಸಾರ ನಡೆಯೋದು ಒಬ್ರ ಸಂಬಳದಿಂದ ಆಗಲ್ಲ, ಅದಕ್ಕೆ ಸಿನಿಮಾ fieldಗೆ ಬಂದೆ. ಒಂದ್ ಮಗು ಇತ್ತು, ತೀರ್ಕೊಂಡ್ ಬಿಡ್ತು. ಮೊದ್ಲು ಒಕ್ಕೂಟದಲ್ಲಿದ್ದಾಗ, Payment ಬೇರೆ ಸೌಕರ್ಯ ಎಲ್ಲ ಚೆನ್ನಾಗಿತ್ತು. ನಮ್ಗೆ ಬಿಡೋಕ್ಕೆ ಇಷ್ಟ ಇರ್ಲಿಲ್ಲ. ಕೆಲವರ ಕಿತಾಪತಿಯಿಂದ ಈಚೆ ಬರ್ಬೇಕಾಯ್ತು. ಈಗ್ಲೂ ನಮಗೆ ವಾಪಸ್ ಹೋಗೋದೇ ಇಷ್ಟ. ಅದಕ್ಕೆ ಪ್ರಯತ್ನ ಪಡ್ತಾ ಇದೀವಿ.

ಇಲ್ಲಿ ಸಿಗೋ ದುಡ್ಡಿನಿಂದಷ್ಟೆ ಜೀವ್ನ ನಡೆಸೋದಕ್ಕೆ ಸಾಧ್ಯ ಇಲ್ಲ. ಶೂಟಿಂಗ್ ಇಲ್ದೆ ಇರೋವಾಗ ಬೇರೆ ಕೆಲ್ಸ ಮಾಡೋದರ ಬಗ್ಗೆ Plan ಮಾಡ್ತಾ ಇದೀವಿ. ಅದಕ್ಕೆಲ್ಲ ಜಾಗ ಬೇಕು, ದುಡ್ ಬೇಕು. ಏನಾದ್ರೂ ಚಿಕ್ಕದಾಗಿ ಸ್ವೀಟ್ ಬಾಕ್ಸ್‌ಗಳ ಮಾಡೋದು, ಆ ತರಹದ್ದು ಏನಾದ್ರೂ ಮಾಡ್ಬೇಕು ಅಂದ್ಕೊಂಡಿದೀವಿ. ಆಗುತ್ತೊ, ಇಲ್ವೋ ಗೊತ್ತಿಲ್ಲ.

ಸಹಕಲಾವಿದರಲ್ಲಿ ಹೆಂಗಸ್ರೆ ಜಾಸ್ತಿ ಇರೋದು. ಶೂಟಿಂಗ್ ಬೆಂಗಳೂರಿನಿಂದ ಹೊರ್ಗಡೆ ಇದ್ರೆ ಎಲ್ಲಾ ವ್ಯವಸ್ಥೆ Producerಗಳೇ ಮಾಡ್ತಾರೆ. ಸ್ಟುಡಿಯೋನಲ್ಲಿ ಶೂಟಿಂಗ್ ಇದ್ರೆ, ಲೇಟಾದ್ರೆ ಅಲ್ಲೆ ಒಂದ್ಕಡೆ ಇರೋಕೆ ಬಿಡ್ತಾರೆ, ಬೆಳಗ್ಗೆ ಬೇಗ ಹೋಗೋಕೆ ಹೇಳ್ತಾರೆ. ಬೇರೆ ಕಡೆ ಇದ್ರೆ ಲೇಟಾದ್ರೆ ಏನೂ ವ್ಯವಸ್ಥೆ ಮಾಡಲ್ಲ, ನಾವೇ ನೋಡ್ಕೋಬೇಕು. ಆದಷ್ಟು ಜೊತೆ ಜೊತೇಲಿ ಹೋಗ್ತೀವಿ. ತುಂಬಾ ಲೇಟಾಗಿದ್ರೆ ಯಾರ್ದಾದ್ರು ಒಬ್ರ ಮನೇಲಿದ್ದು ಬೆಳಗ್ಗೆ ಹೋಗ್ತೀವಿ. ಮದ್ರಾಸ್‌ನಲ್ಲಿ ಸಹ ಕಲಾವಿದರು ಚೆನ್ನಾಗಿದ್ದಾರೆ. ಅವ್ರಿಗೆ payment ಎಲ್ಲಾ ಚೆನ್ನಾಗಿದೆ, ಇರೋದಕ್ಕೆಲ್ಲ ಜಾಗ ಕೊಟ್ಟಿದ್ದಾರೆ ಅಂತ ಇಲ್ಲಿಗೆ ಬರೋರು ಹೇಳ್ತಾರೆ.

ಆರತಿ : ನಾನು 5-6 ವರ್ಷದಿಂದ ಇಲ್ಲಿದೀನಿ. ಹೆಂಗಸ್ರಿಗೆ ಎಲ್ಲಾ ಕಡೇನೂ ಕಿರುಕುಳ ಇರುತ್ತೆ. ಅವನ್ನೆಲ್ಲ ಸೈಸ್ಕೊಂಡ್ ಹೋಗೋ capacity ಇರೋದಕ್ಕೇ ನಾವಿಲ್ಲಿ ಇರೋದು. ಹೆಂಗಸ್ರು ಏಜೆಂಟಾದ್ರೆ ಒಳ್ಳೇದು. ನಮ್ ತೊಂದ್ರೆನೆಲ್ಲ ಗಂಡಸ್ರತ್ರ ಹೇಳೋಕೆ ಆಗಲ್ಲ. ಹೆಂಗಸ್ರಿಂದ್ರೆ ನಮ್ಮ Personal, ಮನೆ ಕಷ್ಟ ಹೇಳ್ಕೋಬೋದು. ಇಲ್ಲಿ ನಮ್ಗಿಂತ ದೊಡ್ಡೋರು, ಅನುಭವ ಇರೋರು ನಮ್ಗೆ ಏನ್ ಮಾಡ್ಬೇಕು, ಹೆಂಗೆ ಇರ್ಬೇಕು ಅನ್ನೋದೆಲ್ಲ ಹೇಳ್ಕೊಡ್ತಾರೆ.

ಸಾವಿತ್ರಿ : ನಾನು 10 ವರ್ಷದಿಂದ ಇದೀನಿ. ಶೂಟಿಂಗ್ ಇರೋವಾಗ ದಿನಕ್ಕೆ 50 ರೂಪಾಯಿ ಸಿಗುತ್ತೆ. ಅದ್ರಲ್ಲಿ Bus chargeಗೆ ಅಂತ 10-15 ಖರ್ಚಾಗುತ್ತೆ. ಶೂಟಿಂಗ್ ಇಲ್ದೆ ಇದ್ದೋವಾಗ ಊದ್‌ಬತ್ತಿ ವಸೀತೀನಿ. ಮನೆ ಕೆಲ್ಸಾನೂ ಮಾಡ್ತೀವಿ. ಗಂಡ workshopನಲ್ಲಿ ಕೆಲ್ಸ ಮಾಡ್ತಾರೆ. ಅವ್ರಿಗೆ 2 ಸಂಸಾರ. ನನ್ ದೊಡ್ ಮಗ ಗಾರೆ ಕೆಲ್ಸ ಮಾಡ್ತಾನೆ. ಸಣ್ಣೋನು ಸ್ಕೂಲಿಗೋಗ್ತಾನೆ. ಸಾಲ್ ದುಡಿಬೇಕು, ತಿನ್‌ಬೇಕು. ಉಳ್ತಾಯ ಮಾಡೋವಷ್ಟು ದುಡಿಮೆ ಇಲ್ಲ.

ಶಾರದ : ಮೊದ್ಲು ನಾನು ಗಾರ್ಮೆಂಟ್ಸ್‌ನಲ್ಲಿ ಕೆಲ್ಸ ಮಾಡ್ತ ಇದ್ದೆ. 2000 ಸಿಗೋದು. ಆ ಕೆಲ್ಸ ನಂಗೆ ಸರಿ ಹೋಗ್ಲಿಲ್ಲ, ತುಂಬಾ heat ಆಗೋದು, ಸುಸ್ತಾಗೋದು, ತಲೆ ಸುತ್ ಬರ್ತಾ ಇತ್ತು. ಅದಕ್ಕೆ ಬಿಟ್ಟೆ. ಮನೇಲೇ ಇದ್ದೆ. ನಮ್ ಚಿಕ್ಕಪ್ಪ ಸಿನಿಮಾ fieldನಲ್ಲಿ ಇದಾರೆ. ಮನೇಲಿ ಸುಮ್ನೆ ಕೂತ್ಕೋಳದ್ರ ಬದ್ಲು ಇಲ್ಲಿಗ್ ಬಂದ್ರೆ ಸಂಪಾದ್ನೆ ಆಗುತ್ತೆ ಅಂತ ಕರ್ಕೊಂಡ್ ಬಂದ್ರು. ಇಬ್ರು ಹೆಣ್ ಮಕ್ಳು ಇದಾರೆ ನಂಗೆ. ಊರಲ್ಲಿ ಅಮ್ಮನತ್ರ ಬಿಟ್ಟಿದೀನಿ. ನನ್ನ ಗಂಡ Private ಫ್ಯಾಕ್ಟ್ರೀನಲ್ಲಿ ಕೆಲ್ಸ ಮಾಡ್ತರೆ. ಓಂ ನಮಃ ಶಿವಾಯ, ರವಿ ಮಾಮ, ವಿಶ್ವದಲ್ಲಿ Part ಮಾಡಿದೀನಿ. ಓಂ ನಮಃ ಶಿವಾಯದಲ್ಲಿ ಒಂದ್ ಡೈಲಾಗ್ ಇದೆ.

ಜಯಮ್ಮ : ನಾವು ತುಂಬ ಬಡವ್ರು. ಓದಿಲ್ಲ, ಬರ್ದಿಲ್ಲ. ಬೇರೆ ಕೆಲ್ಸ ಬರಲ್ಲ. ಶೂಟಿಂಗ್ ಇಲ್ದೆ ಇರೋವಾಗ, ಊದ್‌ಬತ್ತಿ ಮಾಡ್ತೀನಿ. ಬಿಲ್ಲೂ ಕಿರಿಕ್, ಈ ಬತ್ತಿ ಸರಿ ಇಲ್ಲ, ಆ ಕಡ್ಡಿ ಸರಿ ಇಲ್ಲ ಅಂತಾ ಕಾಸ್ ಕಟ್ ಮಾಡಿ ಕೊಡ್ತಾರೆ.

*ಫೆಬ್ರುವರಿ 17, 18, 19ರಂದು ಹೈದರಾಬಾದಿನಲ್ಲಿ ಅಖಿಲ ಭಾರತ ಸಿನಿಮಾ ಕಾರ್ಮಿಕರ ಸಮ್ಮೇಳನ ನಡೆಯಿತು. ಕಾರ್ಮಿಕರಿಗೆ ಸಂಬಂಧಪಟ್ಟಂತೆ ಹಲವಾರು ನಿರ್ಣಯಗಳನ್ನು ಕೈಗೊಳ್ಳಲಾಯಿತು. ಮಹಿಳೆಯರನ್ನು ಕುರಿತಂತೆ ಮುಖ್ಯವಾದ ನಿರ್ಣಯವನ್ನು ಕೈಗೊಳ್ಳಲಾಯಿತು. ಸಿನಿಮಾ ಕ್ಷೇತ್ರದ ಬೇರೆ ಬೇರೆ ಹಂತಗಳಲ್ಲಿ, ಬೇರೆ ಬೇರೆ ರೀತಿಯಲ್ಲಿ ಮಹಿಳೆಯರಿಗೆ ಆಗುತ್ತಿರುವ ಅನ್ಯಾಯವನ್ನು ಸಮ್ಮೇಳನ ಒಪ್ಪಿಕೊಳ್ಳುತ್ತದೆ. ಅದನ್ನು ತಡೆಯಲು ಕ್ರಮ ಕೈಗೊಳ್ಳಲು ಪ್ರಾಂತೀಯ ಮಟ್ಟದಲ್ಲಿ ಎಚ್ಚರಿಕೆ ನೀಡುವ ಸೆಲ್‌ಗಳನ್ನು (monitoring cell) ಸ್ಥಾಪಿಸುವುದನ್ನು ಸರ್ವಾನುಮತದಿಂದ ಒಪ್ಪಲಾಯಿತು.*

ಗಂಡ ಕೂಲಿ ಕೆಲ್ಸ ಮಾಡ್ತಾನೆ. ಶೂಟಿಂಗ್ ಐತಾ ಅಂತ ಬಂದ್ ಕೇಳ್ಕತ್ತೀವಿ, ಇದ್ರೆ ಬತ್ತೀವಿ ಅಷ್ಟೇ.

ಭಾಗ್ಯ : ನಾನು ಒಂದುವರೆ ವರ್ಷದಿಂದ ಇದೀನಿ. 4ನೇ ಕ್ಲಾಸ್ ಓದಿದೀನಿ. ನಾನು ಟೈಲರ್ ಟ್ರೈನಿಂಗ್ ಅರ್ಧ ಮಾಡಿದೀನಿ. ಇಂಟ್ರೆಸ್ಟ್ ಇರ್ಲಿಲ್ಲ. ಬಿಟ್‌ಬಿಟ್ಟೆ. ಮನೇಲಿ ತಾಯಿ, ತಂಗಿ, ತಮ್ಮ ಇದಾರೆ. ನಾವಿರೋದು 2ನೇ ತಂದೆ ಜತೇಲಿ. ದೇವಸ್ಥಾನದಲ್ಲಿ ಯಾರೋ ಬಿಟ್ಟೋಗಿದ್ ಮಗೂನ ಸಾಕ್ತಾ ಇದೀವಿ, ಅದೇ ನನ್ ತಂಗಿ. ಎರಡ್ನೆ ಡ್ಯಾಡಿ ಎಷ್ಟಂದ್ರು ನಿಜವಾದ್ ಡ್ಯಾಡಿ ತರ ಅಲ್ವಲ್ಲ. ಅದ್ಕೇ ನಾನು ದುಡೀಬೇಕು. ಪರಿಚಯದವರು ಈ fieldಗೆ ಕರ್ಕೊಂಡ್ ಬಂದ್ರು. ಮೊದ್ಲು ಎಲ್ಲ ಸ್ವಲ್ಪ ಕಷ್ಟ ಆಯ್ತು. ಯಾರತ್ರ ಹೆಂಗೆ ಇರ್ಬೇಕು ಅವೆಲ್ಲ ಏನೂ ಗೊತ್ತಿರ್ಲಿಲ್ಲವಲ್ಲ. ಈಗ ಪರ್ವಾಗಿಲ್ಲ, adjust ಆಗಿದೆ. ಸರೋಜಮ್ಮ ಮೇಡಂ ಅಂತವರು ನಮ್ಗೆ support ಕೊಡ್ತಾರೆ.

ಗಂಗಾಧರ್ : (ಇವರು ಸಹ ಕಲಾವಿದರನ್ನು ಒದಗಿಸುವ ಏಜೆಂಟರು) ನಾನು ಈ fieldನಲ್ಲಿ 50 ಪೈಸೆ ಕೊಡ್ತ ಇದ್ದಾಗ್ಲಿಂದ್ಲು ಇದೀನಿ. ಅದ್ಕೆ ನಂಗೆ ಈ ಸಹಕಲಾವಿದರ ಕಷ್ಟಗಳು ಗೊತ್ತು. ಇಲ್ಲಿಗೆ ಯಾರೂ ಹೊಟ್ಟೆ ತುಂಬಿದೋರು ಬರೋಲ್ಲ. ಅರ್ಧ ಹೊಟ್ಟೆಲಿರೋರೆ ಇಲ್ಲಿಗೆ ಬರೋದು. ಶೂಟಿಂಗ್‌ಗೆ ಬಂದ್ರೆ ಬೆಳಿಗ್ಗೆ ನಾಷ್ಟ, ಮಧ್ಯಾನ ಊಟ ಕಳೆಯುತ್ತೆ. ಬೇರೆ ಉದ್ಯೋಗ ಗೊತ್ತಿಲ್ಲ. ಸ್ವಲ್ಪ ಚೆನ್ನಾಗಿದ್ರೆ ಯಾವ ಸೀನ್‌ಗೆ ಬೇಕಾದ್ರು ಸೆಟ್ಟಾಗ್ತರೆ, ಲಾಯರ್ ಡ್ರೆಸ್ಸು, ಡಾಕ್ಟ್ರು ಡ್ರೆಸ್ಸು ಹಾಕ್ತಾರೆ, ಡೈಲಾಗು ಕೊಡ್ತಾರೆ, Sexy Scene, Swimming ಡ್ರೆಸ್ಸು ಇದ್ರೆ ಜಾಸ್ತಿ ದುಡ್ ಸಿಗುತ್ತೆ. ಅಂದ ಚೆಂದ ಇರೋರ್ನ ಗುಂಪ್‌ಸೀನ್‌ಗೆ, ಮಧ್ಯೆ ಸೀನ್ ಅಂತದಕ್ಕೆ ಆಕ್ಕೋತಾರೆ. ಕೆಲವು ಅಂದ ಇಲ್ಲ, ಚೆಂದ ಇಲ್ಲ, ಒದ್ರೆ ಸಿಮೆಂಟ್ ಹೊರೋಕೇ ಹೋಗ್‌ಬೇಕು, ಇಲ್ ಬಂದ್ರೆ ಊಟ, ತಿಂಡಿ ಕಳ್ದು ಕೈಗೆ ಸ್ವಲ್ಪ ದುಡ್ ಸಿಗುತ್ತೆ. ಅದ್ರಲ್ಲಿ ಮನೆ ಜನ ಸಾಕ್ತಾರೆ, ಹೆಂಗಸ್ರೆ ಸಂಘ ಮಾಡ್ಕೋಬೇಕು. ಅವರ್ನೆ ಏಜೆಂಟ್‌ಗಳ್ ಮಾಡ್ಬೇಕು. ಗಂಡಸ್ರುಂದ್ರೆ ದುಡ್‌ತಗಂಡ್ ಕುಡ್ದು ಎಲ್ಲೋ ಮಲ್ಕಂಡ್ ಎದ್ದೋಯ್ತರೆ, ಹೆಂಗಸ್ರುಂದ್ರೆ ಅಂಗಲ್ಲ.

ಮೊದ್ಲು ಒಕ್ಕೂಟದಲ್ಲಿದ್ದಾಗ ಗುರುತಿನ ಚೀಟಿ ಇತ್ತು. ಇಂತಿಷ್ಟೆ ದುಡ್ಡು ಅಂತ fix ಮಾಡಿದ್ರು. ನೇರವಾಗಿ ಕಲಾವಿದರ ಕೈಗೆ payment ಹೋಗೋ ಹಂಗೆ ಮಾಡಿದ್ರು. ಏಜೆಂಟ್ರು ಕೈಗೆ ಕೊಡ್ತ ಇರ್ಲಿಲ್ಲ. ಅವ್ರಿಗೆ ಕಮಿಷನ್ ಅಂತ ಕೊಡೋರು. ಇದು ಅವ್ರಿಗೆ ಸರಿ ಬರ್ಲಿಲ್ಲ. ಕಲಾವಿದರ್ನ ಕರ್ಕೊಂಡ್ ಬರೋ ಖರ್ಚು, ಅವ್ರಿಗೆ ಕಾಫಿ, ತಿಂಡಿ ಕೊಡ್ಸೊ ಖರ್ಚು ಎಲ್ಲ ನಮ್ಗೆ ಹೆಚ್ಚಾಗಿ ದುಡ್ ಬೇಕು ಅಂತ ಕಿತಾಪತಿ ಮಾಡಿದ್ದಕ್ಕೆ, ಒಕ್ಕೂಟದಿಂದ ಇಚೆ ಬರ್ಬೇಕಾಯ್ತು. ಈ ಮಹಿಳೆಯರ್ದೆ ಸಂಘ ಮಾಡಿ ವಾರ್ತಾ ಮಂತ್ರಿ ನೋಡಿದೀವಿ, ಧರಣಿ ಮಾಡಿದೀವಿ, ಅಂಬರೀಷ್ ಅವರ್ನು ನೋಡಿದೀವಿ, ಫಿಲ್ಮ್ ಛೇಂಬರ್ಗು ಬರ್ದೀದೀವಿ, ಮಹಿಳೆರ್ನೆ ಏಜೆಂಟ್ ಮಾಡಿ ಅಂತ. ಈಗ ಆಫೀಸ್ ಮಾಡ್ಕಂಡಿದೀವಿ. ಬಂದ್ರೆ ಕುತ್ಕೋಳಕೆ ಅಂತಾ ಜಾಗ ಆದ್ರು ಆಯ್ತು. ಮೊದಲೆಲ್ಲ ಶೂಟಿಂಗ್ ಐತಾ ಅಂತ ಕೇಳ್ಕೊಂಡ್ ಬಂದು ಫುಟ್‌ಪಾತ್ ಮೇಲೆ ಕುತ್ಕೋಬೇಕಾಗಿತ್ತು.

## ಮಾನವೋತ್ತಮ ದಾಸ್ಯ

ಜಾತಿ ಮತಗಳ ದಾಸ್ಯ ಪಂಥ ಪಂಗಡ ದಾಸ್ಯ
ದೀಕ್ಷೆ ಮುಂಜಿಗಳ ಆಜನ್ಮ ದಾಸ್ಯ
ಜಗದ್ಗುರು ಭಗವಾನರು ಯೋಗಿ ಯತಿಗಳ ದಾಸ್ಯ
ಸುಳ್ಳು ಪ್ರವಾದಿಗಳ ಚರಣದಾಸ್ಯ
ಪಾಪ ಪುಣ್ಯದ ದಾಸ್ಯ, ಸ್ವರ್ಗ ನರಕದ ದಾಸ್ಯ
ಜನ್ಮ ಜನ್ಮಾಂತರದ ಕರ್ಮ ದಾಸ್ಯ
ಮಠಮಂದಿರಗಳ ದಾಸ್ಯ, ಚರ್ಚು ಮಸೀದಿಗಳ ದಾಸ್ಯ
ಗ್ರಂಥ ಮತಾಂತರಗಳ ಮರಣ ದಾಸ್ಯ
ಮಂತ್ರ ಮೋಕ್ಷದ ತಂತ್ರ ಶಕ್ತಿಯ ದಾಸ್ಯ

ಸನಾತನ ಸಂಪ್ರದಾಯಗಳ ಕಿಲುಬು ದಾಸ್ಯ
ಮಡಿ ಮೈಲಿಗೆಯ ದಾಸ್ಯ ಮೇಲುಕೀಳಿನ ದಾಸ್ಯ
ಮೂಢಾನುಕರಣೆಗಳ ಕೇಡು ದಾಸ್ಯ
ಎಲ್ಲ ದಾಸ್ಯವ ದೂಡು ಅಂತಃ ಸ್ವಾತಂತ್ರ್ಯದಿ ಬಾಳು
ಅಂಧ ವಿಶ್ವಾಸವ ಹರಿದು ಅನಂತ ಸತ್ಯದೊಳು ಅರಳು
ಬಾ ಗೆಳೆಯ ಬಾ ಸನಿಹ ಮಾನವೋತ್ತಮ ಹೃದಯ
ಜಗದ ಹೊಸ ಬದುಕಿಗೆ ನೀನೇ ಅರುಣೋದಯ

*ವೀರಭದ್ರ ಚೆನ್ನಮಲ್ಲ ಸ್ವಾಮೀಜಿ.*

# ಬದ್ಕಕ್ಕೆ ದಾರಿ ಮಾಡಕಾಗ್ದೋರು ಸಾಯ್ಸಕ್ಕೆ ಸಿಡಿಮದ್ದು ಮಾಡ್ತರೆ

ಸಣ್ ತಿಮ್ಮಿ ಕೊಪ್ಲಾಗಿದ್ ಸೊಪ್ಪಿನ್ಮಡಿಗೆ ನೀರ್ ಉಯ್ತಿದ್ಲು. ಅಚ್ಚಸ್ರುಗಿರೊ ಸೊಪ್ಪಿನ್‌ಮಡಿ, ಗಿಡವೆಲ್ಲಾ ಮೊಗ್ಗ್ ತುಂಬ್ಕಂಡಿರೊ ಮಲ್ಗೆ ಬಳ್ಳಿ, ಚಪ್ರದಾಗ್ ನೇತಾಡೊ ತುಪ್ಪೀರೇ ಕಾಯ್ಗಳ್ ನೋಡಿ ವಟ್ಟೆಲ್ಲ ತಂಪಾದಂಗ್ ಅನ್ಸ್ತು ತಿಮ್ಮಿಗೆ. ಮರ್ದ್ ಮರೆಲಿ ನಿಧಾನ್ಕೆ ಎಳ್ದೆಳ್ದು ಕೂಗುಡ್ತಿದ್ದ ಕೋಗಿಲೆ ದನಿ ಕೇಳಿ “ಲೌಡಿ ವಟ್ ತುಂಬಿ ಸುಸ್ತ್ ಕಂಡವ್ಳೆ” ಅಂದಕಂಡ್ಲು. ಮೂಲೆಗಿರೊ ಸೀಬೆ ಮರ್ದ್ತವ ಒದ್ಲು. ಅಡಿಲಿ ಬಿದ್ದಿರ ಇಚ್‌ಕಾಯ್‌ಗೋಳು, ಎಲೆ ನೋಡಿ - ಕಳ್‌ಮುಂಡೆವು ಸೀಬೆಣ್ಣ್ ಆಸೆಗೆ ಕೊಪ್ಲಿಗ್ ನುಗ್ತವೆ. ಅಣ್ಣ್ ತಿನ್ಕಂಡ ಆಳಾಗೋಗ್ಲಿ ಏಸೊಂತರ ಇಚ್‌ಕಾಯ್ನೆಲ್ಲ ಕಿತ್ತಾಕ್ತವೆ. ಬಿಟ್ಟಿದ್ರೆ ಏಸೊಂತರ ಅಣ್ಣಾಗಿರದು. ಅಂತ ಆತ್ರ ಬಡ್ಡೆತ್ವ್ಕೆ. ಆ ಕಾಗೆ, ಗಿಣ್‌ಗೋಳು ಅವೆ ಅಣ್ಣನ್ನೆ ಉಡ್ಕಿ ತಿಂತವೆ, ಅದು ಎಷ್ಟ್ ಬೇಕೋ ಅಷ್ಟೆ, ನಾಜೋಕಾಗಿ ತಿಂತವೆ. ಈ ಎಲ್ಡ್ ಕಾಲಿನ್ ಕಾಗ್ಳೊಳು ಸಿಗ್ಲಿ ಕುಂಡಿ ಮ್ಯಾಲೆ ಬರೆ ಆಕ್ತಿನಿ ಅಂತ ಮಣಗುಡ್ತ ಇದ್ಲು. ಯಾರೊ ತಿಮ್ಮಿ... ಅಂದಂದಾಗಿ ತಿರ್ಗಿರೆ ಸರೋಜ ಕೊಪ್ಲೊಳಿಗೆ ಬತ್ತಾ ಅವ್ಳೆ.

ತಿಮ್ಮಿ : ಅಗಳೆ ಸರೋಜಕ್ಕ! ಯಾವಾಗ್ಲು ಇಂಗೆಯಾ ಗಾಳೊಡ್ಕಂಡ್ ಬಂದಂಗೆ ಬತ್ತಿಯಲ್ಲೆ. ಇತ್ತಗ್ ಬಾ ವಂಗೆ ಮರ್ದ್ ನೆಳ್ಳಿಗೆ. ಆ ತೆಂಗಿನ್ ಗರಿ ಎಳ್ಕಳೆ ಅಡಿಕೆ. ಅಂತ ಕೂಡ್ಸಿ ರೋಟ್ ಕುಡ್ಲು ತಗಂಡು ಒಂದು ಕೆಂದೆಳ್ನಿರ್ ಉಳ್ದ್ಸಿ, ಕೊಚ್ಚಿ ಕುಡ್ಕೆ ಬಾಯಾರದೇನು ಅಂತ ಕೊಟ್ಲು. ಒಂದ್ ಗಳ್ಗೆ ಇರೆ ಸೊಪ್ಪಿನ್ ಮಡಿಗೆ ಎಲ್ಡ್ ನೀರುಯ್ದು ಬತ್ತಿನಿ ಅಂತ ಗಡ್ಗೆ ತಗಂಡು ಒಂಟ್ಲು.

ಎಳ್ನಿರ್ ತಂಪು, ಹಸಿರಿನ ತಂಪು, ತಂಪನೆ ತಿಮ್ಮಿ ನೋಡಿ ಸರೋಜನಿಗೆ ಹಾಯೆನಿಸಿತು. ನೀರು ಉಯ್ದು ಮುಗ್ಸಿ ಬಂದ್ಲು ತಿಮ್ಮಿ.

ತಿಮ್ಮಿ : ಎಂಗಿದಿಯೆ? ಏನ್ ಬಂದೆ?

ಸರೋಜ : ಇಂಗೆ ಬಂದೆ ಕಣೆ, ಯಾಕೊ ಸ್ಯಾನೆ ಬೇಜಾರಾತು.

ತಿಮ್ಮಿ : ಇಲ್ಲುದ್ದೆಲ್ಲವ ತಲ್ಗೆ ಸುತ್ಕಂತಿಯವ್ವ. ಮಕ ನೋಡು ಯಂಗ್ ಬತ್ತೊಗದೆ, ಯಾಕ್ ಬ್ಯಾಸ್ರ ಮಾಡ್ಕಂಡಿದಿಯೆ?

ಸರೋಜ : ಈ ಬಿ.ಜೆ.ಪಿ.ರೊ ಬಾಂಬ್ ಆಕಿದ್ರಲ್ಲ.

ಸಣ್ ತಿಮ್ಮಿ : (ಸಪ್ಪಗವ್ಳೆ ಅಂತ ನಗ್ಸಕ್ಕೆ) ಬಿಡೆ, ಎಲ್ಡ್ ಅವ್ರೆ ಕಾಳ್ ಎಚ್ಚಾಗ್ ತಿಂದಿದ್ರೇನೊ ಅದಕ್ಕೆ ಬಾಂಬ್ ಆಕವ್ರೆ. ಅವ್ರೆ ಕಾಳ್ನು ಅರ್ಗುಸ್‌ಕಳಾಕ್ ಆಗ್ದವು.

ಸರೋಜ : ನಾನೇನೊ ಗಂಭೀರ್‌ವಾಗಿ ಏಳಕ್ಕೆ ಒದ್ರೆ ನಿಂಗೆ ತಮಾಷೆ.

ಸಣ್ ತಿಮ್ಮಿ : ಸುಮ್ನೆ ನಗ್ಸಾರ ಮಾಡ್ದೆ ಕಣೆ, ಏನಾಯ್ತು ಸರಿಗೇಳು.

ಸರೋಜ : ಕಳ್ದ್ ವರ್ಸ ಇದೆ ಸಮಯಕ್ಕೆ ಬಿ.ಜೆ.ಪಿ. ಸರ್ಕಾರ್‌ದೋರು ತಯಾರ್ ಮಾಡ್ದ್ ಬಾಂಬ್‌ನ ಪರೀಕ್ಷೆ ಮಾಡಿರು. ರಾಜಾಸ್ತಾನದ್ ಮರ್ಳ್ಗಾಡ್‌ನಾಗೆ. ಎಂತ ಬಾಂಬ್ ಅಂದ್ರೆ ಭೂಮಿ ನಡ್ಗೋಗಿ, ನೆಲ್ಕ್ ನೆಲ್‌ವೆಯಾ ಮ್ಯಾಕ್ ಎದ್ದು ಬುಡ್ತು. ಅದುನ್ನ ನೋಡಿ ಬಾಂಬ್ ಮಾಡಿದ್ ಗನಾಂದಾರಿಗಳೊಲ್ಲ ಬಾಂಬ್ ಪಶ್ಟ್ ಕ್ಲಾಸಾಗದೆ, ಊರಿನ್ ಮ್ಯಾಲೆ ಆಕಿರೆ ಒಂದೇಟ್ಗೆ ಸಾವ್ರಾರ್ ಜನ ನೊಣ್‌ಗುಳ್ ಬಿದ್ದಂಗೆ ಬಿದ್ದೋಯ್ತರೆ ಅಂತ ಸಂತೋಷ ಪಟ್ಕಂಡ್ರು.

ಸಣ್ ತಿಮ್ಮಿ : ಊ ನಾನು ಕೇಳಿದ್ದೆ, ಇಗ ಯಾರ್ಮೆಲಾರು ಬಾಂಬ್ ಆಕಿರಾ?

ಸರೋಜ : ಇಲ್ಲ ಕಣೆ. ಕಳ್ದ್ ವರ್ಷ ಬಾಂಬ್ ಮಾಡಿದ್ರು. ಈ ವರ್ಷ ಬಾಂಬ್ ಮಾಡಿ ವರ್ಷಾತು ಅಂತ ಎಲ್ಲ ಕಡೆಯೂ ಸಭೆ ಸಮಾರಂಭ ಮಾಡಿರು. ನೆನ್ನೆ ದಿನ ಕಾಲೇಜ್ ಮೇಷ್ಟ್ರುಗಳು, ದೊಡ್ ದೊಡ್ ಆಫಿಸರ್‌ಗಳು ಬಾಂಬಿನ ಬಗ್ಗೆ ಮಾತಾಡಕ್ಕೆ ಅಂತ ಒಂದ್ ಸಭೆ ಮಾಡಿದ್ರು. ತಿಳ್ದೀರೊ ಬುದ್‌ವಂತ್ ಜನ ಬಾಂಬ್ ಎಂತದ್ದು, ಅದ್ರಿಂದ ಏನಾಗುತ್ತೆ ಅಂತ ಏಳ್ತರೇನು ಕೇಳನ ಅಂತ ಒಗಿದ್ದೆ.

ಸಣ್ಣ ತಿಮ್ಮ : ಏನಾತು ಅಲ್ಲಿ?

ಸರೋಜ : ಅಲ್ಲಿ ಸೇರಿದ್ದೋರೆಲ್ಲ ಬರ್ರೀ ಡಿಗ್ರಿ ತಗೊಂಡಿದ್ದೋರು. ಒಳ್ಳೆ ಬಟ್ಟೆ ಆಕ್ಕಂಡು ಬೆಳ್ಳಗಿದ್ ಜನ ಕಣೆ. ಯಾವನೊ ಒಬ್ಬ ಕಾಲೇಜಿನ್ ದೊಡ್ಡ ಮೇಷ್ಟ್ರು. ಅದು ವಿಜ್ಞಾನದ್ ಮೇಷ್ಟ್ರು. ಬಾಂಬ್ ಮಾಡಾದನೆಲ್ಲ ಚಿತ್ರದ್ ಸಮೇತ ವಿವರವಾಗಿ ಹೇಳ್ದ. ದೇಶ ಕಾಯಕ್ಕೆ ಬಾಂಬ್ ಬೇಕು. ಬೇರೆ ದೇಶ್ದೋರು ಏನೆನ್ನೆಲ್ಲಾ ಮಾಡವ್ರೆ. ನಾವು ಯಾರ್ಗು ಕಮ್ಮಿ ಇಲ್ಲ. ನಾವು ಹಾಡಂತೆ, ಕತೆ, ಸಾಹಿತ್ಯ ಅಂತ ಕುತ್ಕಂಳದ್ರ ಬದಲು ನಾವ್ ಬಲ್‌ವಾಗಿದ್ದೀವಿ ಅಂತ ಎಲ್ಲಾರ್ಗು ತೋರ್ಬೇಕು. ಅದ್ ಬಿಟ್ಟು ಆದ್ಯಾರು ಕುವೆಂಪು ಅಂತೆ, ವಿಶ್ವ ಮಾನವ ಧರ್ಮ ಅಂತ ಬರ್ದ್ರೆ ಶಾಂತಿ ಸಿಗಲ್ಲ. ವಿಶ್ವ ಮಾನವ ಧರ್ಮ ಅಂತ ಬರ್ದೋರು ಅವರ ಮನೆಲಿದ್ದ ರಸ್‌ಪೂರಿ ಮಾವಿನ ಹಣ್ ಕೀಳಕ್ಕೆ ಉಡ್ಗುರು ಬಂದ್ರೆ ಕೋಲಿಡ್ಕಂಡ ಬರ್ದೋರು ಅಂತ ಕುವೆಂಪುನೆಲ್ಲ ಹಿಯ್ಯಾಳಿ ಮಾತಾಡ್ದ ಕಣೆ. ನಾನ್ ಎದ್ದ್ ಮಾತಾಡಕ್ಕೆ ಹೋದ್ದಾಗ, ಮಾತಾಡಕ್ ಬಿಡ್ದಂಗೆ ಅಮುರ್ಕಂಡ್ರು. ಅಲ್ಲಿದ್ದೋರು ಯಾರು ಸೊಲ್ಲೆತ್ಲಿಲ್ಲ. ಎದ್ ಬಂದೆ. ಮನುಷ್ಯರ್ನ, ಬದುಕನ್ನೆ ಸುಟ್ಟು ಆಕೋ ಬಾಂಬ್‌ನ ಬಗ್ಗೆ ಎಷ್ಟ್ ಹೆಮ್ಮೆ ಇಂದ, ಖುಷ್ಯಿಂದ ಮಾತಾಡ್ದ ಅದೂ ಒಬ್ಬ ವಿಜ್ಞಾನದ್ ಮೇಷ್ಟ್ರು. ಇನ್ನೂ ಹುಡುಗ್ರ ಮನಸ್ಸಲ್ಲಿ ಎಷ್ಟ್ ಹಿಂಸೆ ತುಂಬೋದು? ಜನಾನು ಬಾಂಬ್ ಮಾಡಿದ್ಕೆ ಉಬ್ಬಿದ್ದು ಬೀಗೋದ್ ನೋಡಿ ಸಂಕ್ಟ ಆಯ್ತು ಕಣೆ. ಆ ದರಿದ್ರ ಬಾಂಬ್‌ನ ಮದ್ಲಿಗೆ ಅಮೇರಿಕದೋರು ಜಪಾನ್ ಅಂತ ಸಣ್ ಊರನ್ ಮೇಲೆ ಆಕಿರು, ನಮ್ ದೇಶಕ್ಕೆ ಸ್ವತಂತ್ರ ಬರಕ್ಕೆ ಮದ್ಲು. ಅಲ್ಲಿ ಇವತ್ತಿಗೂ ಉಟ್ಟೊ ಮಕ್ಳು ಸೊಟ್ಟ ಮಂದ್‌ಬುದ್ಧಿ ಆಗಿ ಉಟ್ತವೆ. 9 ತಿಂಗ್ಳ ಒಟ್ಟೆಲಿ ಒತ್‌ಕಂಡಿದ್ದು ಸೊಟ್ಟಾಗಿ ಉಟ್ಟಿರೆ ಎಷ್ಟ್ ಸಂಕ್ಟ ಆಗಲ್ಲ. ಇದೆಲ್ಲ ನೆನ್ಸ್ಕಂಡು ಬೇಜಾರಾಗಿ ವಂಟ್ ಬಂದೆ ಕಣೆ.

ಸಣ್ ತಿಮ್ಮಿ : ಸಂಕ್ಟಾಗದು ನಿಜ್‌ವೆಯಾ, ನಮ್ ಕಣ್ ಮುಂದಿನ್ ಮಕ್ಳು ತಟ್ಪಾಡಿರೆ ಸಂಕ್ಟ ಆಗ್ದ? ಭೂಮ್ ತಾಯ್ಗಿನ್ನಾ ಛಿದ್ರ ಮಾಡಾದು ಒಳ್ಳೆದಲ್ಲ ಕಣೆ, ಅವ್ಳೆನಾರು ಸಿಟ್‌ಕಂಡ್ ಬಾಯ್ ಬಿರ್ದ್‌ಕಂಡ್ರೆ ಅಷ್ಟೇಯಾ ನನ್ ಸಮ ಇಲ್ಲ ಅನ್ನೋರುವೆ ಉತೋಯ್ತರೆ, ಅವ್ಳ್ ಸಿಟ್ಟಿನ್ ಮುಂದೆ ಯಾವೊನ್ ನಿಂತಾನು? ಅಲ್ಕಣೆ ಬಾಂಬ್‌ಗೊಳೆ ಮಾಡಿಕ್ಕದಾದ್ರು ಯಾಕೆ?

ಸರೋಜ : ಯಾರಾದ್ರು ಯುದ್ದ ಮಾಡಕ್ ಬಂದ್ರೆ ಅವ್ರ ದೇಶದ್ ಮ್ಯಾಕೆ ಬಾಂಬ್ ಆಕಿ ಸುಡಕ್ಕೆ ಮಾಡ್ತರೆ ಕಣೆ.

ಸಣ್ ತಿಮ್ಮಿ : ಯುದ್ಧ ಮಾಡೊ ಕಲಿಗಳಲ್ಲೆ ಒಂದ್ ಕಡಿಕೆ ಸೇರ್ಕಂಡು ಕತ್ತಿ, ಮಚ್ಚು ತಗಂಡು ಇರ್ದಾಡ್‌ಕಂಡ್ ಸಾಯ್ಲಿ, ಭೂಮ್‌ತಾಯ್‌ನ್ಯಾಕೆ ಸುಡ್‌ಬೇಕು?

ಸರೋಜ : ಬಾಂಬ್ ಮಾಡೋರು ನಾವು ಬಾಂಬ್ ಆಕಿ ಸುಡಲ್ಲ. ಮಾಡಿ ಮಡಿಕಂತೀವಿ. ನಮ್ಹತ್ರವ ಬಾಂಬ್ ಇತ್ತೆ ಅಂದ್ರೆ ಬ್ಯಾರೇರು ಎದ್ರುಕಂಡು ನಮ್ ಗಡಿವಳಿಕೆ ನುಗ್ಗಲ್ಲ. ಅದ್ಕೆ ಮಾಡಿ ಮಡಿಕ್ಕಂಡು ರೆಡಿಯಾಗಿ ಇರ್ಬೇಕು ಅಂತರೆ.

ಸಣ್‌ತಿಮ್ಮಿ : ಅಲ್ಕಣೆ ಇನ್ನೊಬ್ರನ್ನ ಎದ್ರುಸ್ಕಂಡು ಬದ್ಕಕಾದ್ದಾತೇನೇ? ಒಂದ್ ಗೆರೆ ಕುಯ್ದು ಇದ್ ನಂದು ಅದ್ ನಿಂದು ಅಂದ್ಕೊಳದ್ ಸರ್ಯಾ? ನಮ್ಮಂಗೆ ಗಾಳಿ, ನೀರು ಗೆರೆ ಎಳ್ಕಂಡು ಇಲ್ಲಿಂದಾಚ್ಗೆ ನಾನ್ ಬೀಸಲ್ಲ, ಇಲ್ಲಿಂದಾಚ್ಗೆ ನಾನ್ ಅರ್ಯಲ್ಲ ಅಂದ್ಕಳಂಗಿದ್ರೆ ನರ್‌ಮನ್‌ಸ್ರು ಕತೆ ಏನಾಗಿರದು? ನಮ್ಮೂರ ತಗ ಕಿಟ್ಟಯ್ಯನ್ ಮನೆ ದಾಟ್ದ ಮ್ಯಾಲೆ ವಲ್‌ಗುಳು ಅದಾವ್ ಮ್ಯಾಕೆ ಅರ್ಕರೆ. ಅದ್ ಬ್ಯಾರೆ ಅಳ್ಳಿ ಆತು, ಅಂದ್ರೆ ಜನ್ ಬ್ಯಾರೆ ಆದ್ರ? ಅವ್ರು ದುಡಿತರೆ, ಉಣ್ ತರೆ. ನಾವು ಅಷ್ಟೆಯಾ, ಅಲ್ಲಿ ಎಣ್ ಇಲ್ಲಿಗ್ ತತ್ತೀವಿ, ಇಲ್ಲಿ ಎಣ್ಣ್ ಅಲ್ಲಿಗ್ ಕೊಡ್ತೀವಿ. ಇಲ್ಲಿ ಅಟ್ಟನಾಗೆ ಬಾವ್ ಬತ್ತೋದಾಗ, ಬೋರ್ ಆಕೊಸವರ್ಗು ಅರ್ಕರೆ ನೀರ್ ಕೊಟ್ಟಿತ್ತು. ಅಲ್ಲಿ ದನ್‌ಗೊಳು ತಪ್ಸ್‌ಕಂಡ್ ಬಂಜೆನಾಗೆ ಇತ್ತಗ್ ಬಂದಾಗ ನಾನೆ ಏಸೊ ಸಾರಿ ನಮ್ ಕೊಟ್ಗೆಲೆ ಕೂಡ್ಕಂಡು ಬೆಳಿಗ್ಗೆನಾಗ ವಡ್ಕಂಡೋಗಿ ಬಿಟ್ಟಿದೀನಿ. ಮೂಕ್ ಪ್ರಾಣಿಗೊಳಂದ್ರು ಬ್ಲಲ್ ಮರುಡೆವು ಅವು. ಉಲ್ಲು ನೀರ್ ಆಕಿರೆ ಕೊಟ್ಗೆಲಿ ಬೆಚ್‌ಗಿರ್ತವೆ. ಬೆಳ್‌ಗಾನೆದ್ದು ನೋಡನಾ ಅಂತ ಆಲ್ ಕರ್ಸಕೊದ್ರೆ ಒಂದ್ಸಲ ಆಲ್ ಬಿಟ್ರೆ ಕೇಳು ಆಳ್ಕೆರೆ ಮನೆತಾಕ್ಹೋಗಿ ಕರ್ದ್ರೆ ಆಲ್ ಬಿಡ್ತಿದ್ದು. ಅಂಗೆ ನಮ್ಮನ್ನೆ ಆಟ್ಟಿ ಅವ್ದಾದ್ರು ಎಲ್ಲಾತ್ಗು ಇದ್ದಿದ್ದೆಯಾ. ಪಸು ಪಕ್ಸಿಗ್ಳು ಸೈತ. ನಮ್ಮು ಅಂತ ಭೋಪಾನ್ನ ಮಾಡ್ಕಳದ್ ಬ್ಯಾಡ್ಕೆ ಗೆರೆ ಕುಯ್ದು ಕಾಲಿಕ್ಕಿರೆ ಸುಡ್ತೀವಿ ಅನ್ನಾದ್ ಬ್ಯಾಡೆ. ಭೂಮಿ ಮ್ಯಾಗೆ ಜೀವ ಇಟ್ಕಂಡ್ ಉಟ್ಟಿದ್ ಮ್ಯಾಲೆ ಒಬ್ರಿಗೊಬ್ರು ಇಸ್ವಾಸ ಇರ್ಬೇಕು, ಬೆದ್ರುಸದು ಸರಿ ಅಲ್ಲ ಬುಡು. ಅಲ್ಲ ಬಾಂಬು ಅನ್ನದು ಸ್ಯಾನೆ ದೊಡ್ಡೆನೆ? ಎತ್ತಕ್ಕೆ ಸ್ಯಾನೆ ಜವ ಬೇಕನೊ?

ಸರೋಜ: ಇಲ್ಕಣೆ, ಒಂದಿಡಿ ಗಾತ್ರದ್ದು, ದೊಡ್ಡನೆ ಬಂದೂಕ್‌ನಂತದ್ದೂ ಇಲ್ಲ ಇಕ್ಕ ಸಿಡ್ಸ್ತರೆ. ಮಾಡೋರು, ಮಾಡ್ಸೋರು ಯಾರೋ ಆದ್ರೆ ಸಾಯೋರು ನನ್ನಂತ ನಿನ್ನಂತ ಮಾಮೂಲಿ ಜನ ಕಣೆ.

ಸಣ್ ತಿಮ್ಮಿ : ಒಂದಿಡಿ ಬಾಂಬ್‌ನಾಗೆ ಸಾವ್ರಾರ್ ಜನ ಸಾಯ್‌ಸ್ತರಲ್ಲ, ಒಂದ್ ಇರ್ವೆ, ಒಂದ್ ಉಲ್‌ಗರಿಗೆ ಜೀವಕೊಡಕೆ ಇವರ್ಗೆ ಆದಾತಾ? ಕೆಲ್ಸವಿಲ್ಲದ್ ಕುಂಬಾರ ಮಗಿನ್ ತಿಗ ಕೆತ್ತಿನಂತೆ ಅಂಗಾತು. ಮೈ ಮುರ್ದು ದುಡ್ಯಕ್ಕೆ, ಕೇಮಿಲ್‌ದೋರಷ್ಟೆಯಾ ಬಾಂಬ್‌ಗೋಳ್ ಮಾಡಾದು ಮೈ ಮುರ್ದ ದುಡ್ಮೆ, ಒಟ್ ತುಂಬ ಉಣ್ಣಕ್ಕಿದ್ರೆ ಕಣ್ ತುಂಬ ನಿದ್ದೆ ಮಾಡಿ ವೈನಾಗಿರ್ತರೆ ಜನ. ಕ್ಯಾತೆ ಯಾಕೆ ಮಾಡಕೋದ್ದಾರು? ಬದ್ಕ ದಾರಿ ಮಾಡಾಕೆ ಆಗ್ದೋರು, ಸಾಯ್ಕಕ್ಕೆ ಸಿಡ್‌ಮದ್ದ್ ಮಾಡಕೆ ವಂಟ್ವಾ? ಸುಮ್ಕನ್ ಬಿಟ್ಟಾಳಾ ಭೂಮ್‌ತಾಯಿ?

ಸರಸ್ವತಿ ದು.

## ಕಲಾವಿದರ ರಕ್ತ ಹರಿಸಿದ ಕೇಸರಿಗಳು

ವಿವೇಕ (ವಿಚಾರ ವೇದಿಕೆ, ಕರ್ನಾಟಕ)ವು ಕೋಮು ಸಾಮರಸ್ಯಕ್ಕಾಗಿ ಬೀದಿ ನಾಟಕ, ಹಾಡುಗಳು, ಪ್ರಕಟಣೆಗಳನ್ನೊಳಗೊಂಡ ಜಾಥವನ್ನು ಏರ್ಪಡಿಸಿತ್ತು. ಕಾರ್ಯಕ್ರಮದ ಅಂಗವಾಗಿ 'ಸಮುದಾಯ' ತಂಡವು ದಿನಾಂಕ 1.5.99ರಂದು ಆನೇಕಲ್‌ನಲ್ಲಿ ಬೀದಿನಾಟಕದ ಪ್ರದರ್ಶನವನ್ನು ಏರ್ಪಡಿಸಿತ್ತು. ನಾಟಕ ಪ್ರದರ್ಶನದ ಸಿದ್ಧತೆ ನಡೆಯುತ್ತಿರುವಾಗ ಕೆಲವು ದುಷ್ಕರ್ಮಿಗಳು ಸಮುದಾಯದ ಗುಂಡಣ್ಣನವರ ಮೇಲೆ ಹಲ್ಲೆ ಮಾಡಿದರು. ತಡೆಯಲು ಹೋದಾಗ ಇತರ ಕಾರ್ಯಕರ್ತರು, ಕಲಾವಿದರೂ ಹಲ್ಲೆಗೊಳಗಾದರು. ಕೋಮುವಾದಿಗಳ ಹಲ್ಲೆಯನ್ನು ಖಂಡಿಸಿ ವಿವಿಧ ಸಂಘಟನೆಗಳು ದಿನಾಂಕ 2.5.99ರಂದು ಪ್ರತಿಭಟನಾ ಮೆರವಣಿಗೆಯನ್ನು ಏರ್ಪಡಿಸಿದ್ದವು. ಮುಖ್ಯಮಂತ್ರಿ ಪಟೇಲರನ್ನು ಭೇಟಿ ಮಾಡಿ ಘಟನೆಗೆ ಸಂಬಂಧಿಸಿದ ಮನವಿ ಪತ್ರವನ್ನು ಸಲ್ಲಿಸಲಾಯಿತು. ಪ್ರತಿಭಟನೆಯ ಅಂಗವಾಗಿ ದಿನಾಂಕ 10.5.99ರಂದು ಬೆಳಗ್ಗೆ ಆನೇಕಲ್‌ನಲ್ಲಿ ಬೀದಿನಾಟಕವನ್ನು ಸಮುದಾಯ ತಂಡದವರು ಪ್ರದರ್ಶಿಸಿದರು. 2,000ಕ್ಕೂ ಹೆಚ್ಚಿನ ಜನರು ನಾಟಕವನ್ನು ನೋಡುವ ಮೂಲಕ ಮತಾಂಧರಿಗೆ ತಕ್ಕ ಉತ್ತರ ನೀಡಿದರು. ಅದೇ ದಿನ ಸಂಜೆ ರವೀಂದ್ರ ಕಲಾಕ್ಷೇತ್ರದ ಎದುರು ಸಾಹಿತಿಗಳು, ಕಲಾವಿದರು ಧರಣಿ ನಡೆಸಿದರು.

*ಜರ್ಮನಿಯಲ್ಲಿ ಮೊದಲು ಅವರು ಕಮ್ಯುನಿಸ್ಟರನ್ನು ಹುಡುಕಿ ಬಂದರು. ನಾನು ಮಾತನಾಡಲಿಲ್ಲ, ಕಾರಣ ನಾನು ಕಮ್ಯುನಿಸ್ಟ್ ಆಗಿರಲಿಲ್ಲ.*
*ನಂತರ ಅವರು ಜ್ಯೂಗಳನ್ನು ಹುಡುಕಿಕೊಂಡು ಬಂದರು. ನಾನು ಮಾತನಾಡಲಿಲ್ಲ, ಕಾರಣ ನಾನು ಜ್ಯೂ ಆಗಿರಲಿಲ್ಲ.*
*ನಂತರ ಅವರು ಟ್ರೇಡ್ ಯೂನಿಯನಿಸ್ಟರನ್ನು ಹುಡುಕಿಕೊಂಡು ಬಂದರು. ನಾನು ಸುಮ್ಮನಿದ್ದೆ. ಕಾರಣ ನಾನು ಟ್ರೇಡ್ ಯೂನಿಯನಿಸ್ಟನಾಗಿರಲಿಲ್ಲ.*
*ನಂತರ ಅವರು ಸಲಿಂಗಿಗಳನ್ನು ಹುಡುಕಿಕೊಂಡು ಬಂದರು. ನಾನು ಸುಮ್ಮನಿದ್ದೆ, ಕಾರಣ ನಾನು ಸಲಿಂಗಿಯಾಗಿರಲಿಲ್ಲ.*
*ನಂತರ ಅವರು ಕ್ಯಾಥೋಲಿಕರನ್ನು ಹುಡುಕಿ ಬಂದರು. ನಾನು ಸುಮ್ಮನಿದ್ದೆ, ಕಾರಣ ನಾನು ಪ್ರೊಟೆಸ್ಟೆಂಟ್ ಆಗಿದ್ದೆ.*
*ಕೊನೆಗೆ ಅವರು ನನ್ನನ್ನು ಹುಡುಕಿಕೊಂಡು ಬಂದರು. ಆ ಹೊತ್ತಿಗೆ ಧ್ವನಿ ಎತ್ತಲು ಯಾರೂ ಉಳಿದಿರಲಿಲ್ಲ.*

*ಪ್ಯಾಸ್ಟೋರ್ ಮಾರ್ಟಿನ್ ನಿಮೊಲ್ಲರ್*
*(ಹಿಟ್ಲರ್‌ನ ಸಮಯದಲ್ಲಿ ಬರೆದ ಹೋಲೋಕಾಸ್ಟ್ ಪದ್ಯದ ಸಾಲುಗಳು)*

# ಜನರ ಬದುಕಿಗೆ ಮಾರಕವಾಗಿರುವ ನರ್ಮದಾ ಅಣೆಕಟ್ಟು ಯೋಜನೆಗಳು

1999 ಫೆಬ್ರವರಿ 18ರಂದು ನರ್ಮದಾ ಕುರಿತಂತೆ ಸುಪ್ರೀಂ ಕೋರ್ಟ್ ನೀಡಿದ ಇಂಟೀರಿಯಮ್ ಆರ್ಡರ್ ನಮರ್ದಾ ಸುತ್ತ-ಮುತ್ತ ಹಳ್ಳಿಗಳಲ್ಲಿ ವಾಸಿಸುವ ಆದಿವಾಸಿಗಳಿಗೆ ಬಹು ದೊಡ್ಡ ಪೆಟ್ಟನ್ನು ನೀಡಿದೆ. ದಮನಕ್ಕೊಳಗಾದ ಮೂಲೆಗುಂಪಾದ ಜನರ ಬಗ್ಗೆ, ಜನರ ಆಸಕ್ತಿಗಳನ್ನು ರಕ್ಷಿಸುವಲ್ಲಿ ನ್ಯಾಯಾಲಯದ ಪಾತ್ರವನ್ನು ಕುರಿತು ಯೋಚಿಸುವಂತಾಗಿದೆ. ಹಾಗೂ ದೊಡ್ಡ ದೊಡ್ಡ ಯೋಜನೆಗಳ ಹಿಂದಿರುವ 'ಸಾರ್ವಜನಿಕ ಹಿತಾಸಕ್ತಿ'ಗಳನ್ನೂ ಕೂಡಾ ಪ್ರಶ್ನೆ ಮಾಡುವಂತೆ ಆಗಿದೆ.

ಈ ಇಂಟೀರಿಯಮ್ ಆರ್ಡರ್ - ಜನರ ಮರುವಸತಿಗೆ ಮಾತ್ರ ಸೀಮಿತವಾಗಿದ್ದು - ನರ್ಮದಾ ನದಿಯ ಅಣೆಕಟ್ಟನ್ನು 80.8 ಮೀಟರ್‌ನಿಂದ 88 ಮೀಟರ್‌ಗೆ ಏರಿಸಲು ಗುಜರಾತ್ ಸರ್ಕಾರಕ್ಕೆ ಅನುಮತಿ ನೀಡಿದೆ. ಹೀಗೆ ಅಣೆಕಟ್ಟನ್ನು 88 ಮೀಟರ್‌ಗೆ ಏರಿಸಿದ್ದೇ ಆದರೆ ಅಲ್ಲಿನ ಸುತ್ತಮುತ್ತಲಿನ ಜನರು ಭರಿಸಲಾಗದ ನಷ್ಟವನ್ನು ಅನುಭವಿಸಬೇಕಾಗುತ್ತದೆ. ಮಹಾರಾಷ್ಟ್ರ, ಮಧ್ಯಪ್ರದೇಶ ಹಾಗೂ ಗುಜರಾತಿನ ಆದಿವಾಸಿ ಹಳ್ಳಿಗಳು ತುಂಬಲಾಗದಷ್ಟು ನಷ್ಟ ಹಾಗೂ ನೋವನ್ನು ಅನುಭವಿಸಬೇಕಾಗುತ್ತದೆ. ಏಕೆಂದರೆ ತೊಂದರೆಗೊಳಗಾದವರಿಗೆ, ಹಾನಿಗೊಳಗಾದವರಿಗೆ ಮರುವಸತಿ ಕಲ್ಪಿಸುವ ಯಾವ ಸಿದ್ಧತೆಗಳನ್ನೂ ರಾಜ್ಯ ಸರ್ಕಾರಗಳು ಮಾಡಿಕೊಂಡಿಲ್ಲ. ಮರುವಸತಿಯನ್ನು ಬರುವ ತಿಂಗಳು ಅಥವಾ ವರ್ಷಗಳಲ್ಲಿ ಮಾಡುವ ಸೂಚನೆಯು ಇಲ್ಲ. ಹಾಗಾಗಿ ಸುಪ್ರೀಂ ಕೋರ್ಟಿನ ಇಂಟೀರಿಯಮ್ ಆರ್ಡರ್ ಆದಿವಾಸಿಗಳ ಬದುಕುವ ಎಲ್ಲಾ ಹಕ್ಕುಗಳನ್ನು ಕಸಿದುಕೊಳ್ಳುವ ಹುನ್ನಾರವೆಂದೇ ತಿಳಿಯಬಹುದಾಗಿದೆ.

ಮರುವಸತಿಯನ್ನು ಕಲ್ಪಿಸಿಕೊಟ್ಟ ಅನೇಕ ಸ್ಥಳಗಳಿಂದ ಜನರು ತಿರುಗಿ ಬಂದಿದ್ದಾರೆ. ಏಕೆಂದರೆ ಆ ಸ್ಥಳಗಳು ಜನವಸತಿಗೆ ಯೋಗ್ಯವೇ ಅಲ್ಲ. ಜೊತೆಗೆ ಮರುವಸತಿ ಕಲ್ಪಿಸಲು ಬೇಕಾದ ಭೂಮಿಯು ಸರ್ಕಾರದ ಬಳಿ ಇಲ್ಲ. ಇಂತಹ ಸಂದರ್ಭದಲ್ಲಿ ನರ್ಮದಾ ಅಣೆಕಟ್ಟನ್ನು 85 ಮೀಟರ್‌ಗೆ ಏರಿಸುವ ಹಾಗೂ ಈ 85 ಮೀಟರ್ ಒಳಗೆ ಹಾನಿಗೊಳಗಾಗುವ ಜನರಿಗೆಲ್ಲ ಮರುವಸತಿ ಕಲ್ಪಿಸುವ ಆದೇಶವನ್ನು ಸುಪ್ರೀಂ ಕೋರ್ಟ್ ಇಂಟೀರಿಯಮ್ ಆರ್ಡರ್‌ನಲ್ಲಿ ನೀಡಿದೆ. ಸರ್ಕಾರ 90 ಮೀಟರ್ ಒಳಗೆ ಬರುವ ಜನರಿಗೆ ಮರುವಸತಿ ಕಲ್ಪಿಸುವ ಯೋಜನೆಯೊಂದನ್ನು ಈಗಾಗಲೇ ನ್ಯಾಯಾಲಯಕ್ಕೆ ಸಲ್ಲಿಸಿದೆ.

ನರ್ಮದಾ ಕಣಿವೆಯ ಜನರು ಕಳೆದ 14 ವರ್ಷಗಳಿಂದ ಈ ಬಗ್ಗೆ ಹೋರಾಟ ನಡೆಸುತ್ತಲೇ ಇದ್ದಾರೆ. ಜೊತೆಗೆ ಈ ವ್ಯವಸ್ಥೆಯ ಎಲ್ಲಾ ರೀತಿಯ ಅನ್ಯಾಯ, ದಬ್ಬಾಳಿಕೆಗಳನ್ನೂ ಕೂಡಾ ಅವರು ಎದುರಿಸಬೇಕಾಗಿದೆ. ರಾಜ್ಯವು ಒತ್ತಾಯದಿಂದ, ಕಠೋರತನದಿಂದ ಆದಿವಾಸಿಗಳನ್ನು ಸ್ಥಳಾಂತರಗೊಳಿಸಲು ಪ್ರಯತ್ನಿಸುತ್ತಲೇ ಇದೆ. ಆದಿವಾಸಿಗಳು ಹಾಗೂ ಅವರ ಕುಟುಂಬಗಳು ಅವರ ಜೀವನಾವಲಂಬಿತ ಸಂಪತ್ತುಗಳಿಂದ ಇಂದು ವಂಚಿತರಾಗತೊಡಗಿದ್ದಾರೆ. ನರ್ಮದಾ ಆಂದೋಲನದ ಚಳುವಳಿಯು ಇಂದು ಕ್ಲಿಷ್ಟವಾದ ಪರಿಸ್ಥಿತಿಯನ್ನು ಎದುರಿಸತೊಡಗಿದೆ. ಈ ಸಂದರ್ಭದಲ್ಲಿ ನರ್ಮದಾ ಆಂದೋಲನ ನರ್ಮದಾ ಕಣಿವೆಯ ಜನರನ್ನೊಳಗೊಂಡಂತೆ ಒಂದು ದೊಡ್ಡ ಯಾತ್ರೆ ನಡೆಸಿ ನ್ಯಾಯಾಲಯದ ಆದೇಶದ ವಿರುದ್ಧ ಧ್ವನಿ ಎತ್ತಿ ಪ್ರತಿಭಟಿಸಿದೆ. ನರ್ಮದಾ ಕಣಿವೆಯ ಜನರ ಬದುಕುವ ಹಕ್ಕು ಹಾಗೂ ಜೀವನಾವಲಂಬಿತ ಅವಶ್ಯಕತೆಗಳ ಮೇಲೆ, ಶ್ರಮಗಳ ಮೇಲೆ, ಅವರಿಗಿರುವ ಸ್ವಾತಂತ್ರ್ಯವನ್ನು ಎತ್ತಿ ಹಿಡಿದಿದೆ. ಈ ಯಾತ್ರೆ ಡಾ. ಬಿ. ಆರ್. ಅಂಬೇಡ್ಕರ್‌ರವರು ಧ್ವನಿಸಿದ ಶಿಕ್ಷಣ, ಸಂಘಟನೆ ಹಾಗೂ ಹೋರಾಟದ ಹಾದಿ ಆಂದೋಲನವನ್ನು ಜೀವಂತವಾಗಿಡುತ್ತದೆ ಎಂಬುದನ್ನು ಸ್ಪಷ್ಟಪಡಿಸಿದೆ. ಈ ಜನಪರ ಹೋರಾಟವೇ ಪ್ರಜಾಪ್ರಭುತ್ವದ ದಾರಿಯಾಗಬೇಕು. ಮೂಲೆಗುಂಪಾದವರ, ಹಿಂದುಳಿದವರ ಬದುಕುವ ಸಮಾನ ಹಕ್ಕಿನ ಮೇಲೆ ನೀಡುವ ಒತ್ತು ಹಾಗೂ ಹೋರಾಟವೇ ಪ್ರಜಾಪ್ರಭುತ್ವ ಎಂಬುದನ್ನು ದೃಢಪಡಿಸುವಂತೆ ಸಾವಿರಾರು ಜನರು ಈ ನರ್ಮದಾ ಆಂದೋಲನದ ಯಾತ್ರೆಯಲ್ಲಿ ಪಾಲ್ಗೊಂಡಿದ್ದರು. ನರ್ಮದಾ ಕಣಿವೆಯ ಸುತ್ತ-ಮುತ್ತಲಿನ ಹಳ್ಳಿಯ ಎಲ್ಲಾ ಆದಿವಾಸಿಗಳು, ಕುಟುಂಬಗಳು ನರ್ಮದಾ ಅಣೆಕಟ್ಟಿನ ವಿರುದ್ಧದ ಹೋರಾಟಕ್ಕೆ, ಇದರಿಂದಾಗುವ ಹಾನಿಯನ್ನು ನಿಲ್ಲಿಸಲು ನಿರ್ಧರಿಸಿದವರಂತೆ ಸಾವಿರಾರು ಸಂಖ್ಯೆಯಲ್ಲಿ ಈ ಯಾತ್ರೆಯಲ್ಲಿ

ಭಾಗವಹಿಸಿದ್ದರು. ಈ ಕಾರ್ಯಕ್ರಮವು ಸಾರ್ವಜನಿಕ ಸಭೆ, ಬೀದಿ ಸಭೆಗಳು, ನರ್ಮದಾ ಕುರಿತಂತೆ ಚಿತ್ರ ಪ್ರದರ್ಶನ, ಸಿನೆಮಾ ಪ್ರದರ್ಶನ ಹಾಗೂ ಸುದ್ದಿಗಾರರೊಂದಿಗೆ ಸಭೆ ಮುಂತಾದವುಗಳನ್ನೊಳಗೊಂಡಿತ್ತು. ಮೇದಾ ಪಾಟ್ಕರ್, ಬಾಬಾ ಆಮ್ಟೆಯವರನ್ನೊಳಗೊಂಡಂತೆ ಹಲವಾರು ಗಣ್ಯರು ಈ ಯಾತ್ರೆಯ ಹರಿಕಾರರಾಗಿದ್ದರು. ಗುಜರಾತಿನಿಂದ ಡೆಲ್ಲಿಯವರೆಗೆ, ಏಪ್ರಿಲ್ 1ರಿಂದ ಏಪ್ರಿಲ್ 7ರವರೆಗೆ ನಡೆದ ಈ ಯಾತ್ರೆಯಲ್ಲಿ ಭಾಗವಹಿಸಿದ ಜನರು ಇಂಟೀರಿಯಮ್ ಆರ್ಡರ್‌ನ್ನು ವಿರೋಧಿಸುವುದರ ಜೊತೆಗೆ ದೊಡ್ಡ ದೊಡ್ಡ ಯೋಜನೆಗಳು ಜನಪರ ಹಿತಾಸಕ್ತಿಗಳನ್ನು ಹೊಂದಿಲ್ಲವೆಂಬುದನ್ನು ಸ್ಥಳಾಂತರಗೊಂಡ ಈಗಿನ ಆದಿವಾಸಿಗಳ ಜೀವನ ಕ್ರಮಗಳಿಂದ ವಿವರಿಸಿದರು.

ಹಾಗಿದ್ದರೆ ಈ ಅಣೆಕಟ್ಟಿನ ದೊಡ್ಡ ಯೋಜನೆ ಯಾರ ಅಭಿವೃದ್ಧಿಗಾಗಿ? ಈ 'ಅಭಿವೃದ್ಧಿ ಮಾದರಿ'ಯ ಹಿನ್ನೆಲೆಯೇನು? 'ನರ್ಮದಾ ಬಚಾವ್ ಆಂದೋಲನ್' - ಈ ಚಳುವಳಿಯನ್ನು 'ಅಭಿವೃದ್ಧಿ-ವಿರೋಧಿ' ಚಳುವಳಿಯೆಂದು ಯಾಕೆ ಕರೆಯಲಾಗುತ್ತಿದೆ?

ಇದನ್ನು ಗಾಂಧಿ ಹಾಗೂ ನೆಹರುರವರ ಮಧ್ಯೆ ಇದ್ದ ವೈರುಧ್ಯದ ಭಾಗ ಎಂದೂ ಗುರುತಿಸಲಾಗುತ್ತದೆ. ಈ ಇಬ್ಬರು ರಾಜಕಾರಣಿಗಳು 'ಅಭಿವೃದ್ಧಿ' - ಮಾದರಿಗಳನ್ನು ಬೇರೆ ಬೇರೆ ಪ್ರಕಾರವಾಗಿ ಗ್ರಹಿಸಿದ್ದರು. ನೆಹರೂರವರು ಸೋವಿಯತ್ ಮಾದರಿಯ ಕೇಂದ್ರೀಕೃತ ರಾಜ್ಯದ ಮಾದರಿಯನ್ನು ಎತ್ತಿ ಹಿಡಿದರೆ, ಗಾಂಧಿ ಹಳ್ಳಿಗಳ ವಿಕೇಂದ್ರೀಕೃತ ಅಧಿಕಾರದ ಮಾದರಿಯನ್ನು ಎತ್ತಿ ಹಿಡಿದಿದ್ದರು. ನಾವು ಒಳ್ಳೆಯ, ಮಾನವೀಯ ಗುಣ ಹೊಂದಿದ ಮನುಷ್ಯರಾಗಿದ್ದರೆ ಇವೆಲ್ಲ ನಡೆಯುತ್ತಿದ್ದವೋ ಏನೋ? ನೆಹರೂ, ಗಾಂಧಿಯವರ ಎರಡೂ ಮಾದರಿಗಳು ರಾಷ್ಟ್ರದ ಹಿತಾಸಕ್ತಿಯನ್ನು ಎತ್ತಿ ಹಿಡಿಯುವುದನ್ನೇ ಮಾತನಾಡಿದರೂ ಕೂಡಾ ಅದನ್ನು ಸಾಧಿಸುವಲ್ಲಿನ ಕ್ರಮಗಳ ಬಗ್ಗೆ, ದಾರಿಗಳ ಬಗ್ಗೆ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸುತ್ತವೆ. ಇಂದಿನ ವಾಸ್ತವಕ್ಕೆ ಹೊಸ ನಾಯಕರುಗಳನ್ನು ನಾವು ಕಾಯಬೇಕಾಗಿದೆ. ಇಂದಿನ ಸಂದರ್ಭದಲ್ಲಿ ನಿರ್ದಿಷ್ಟ ಕಾರಣಗಳಿಂದಾಗಿ ನಿರ್ದಿಷ್ಟವಾದ ರೀತಿಯಲ್ಲಿಯೇ ನಾವು ಹೋರಾಡಬೇಕಾಗಿದೆ. 'ದೊಡ್ಡದು' - ಎಂಬ ಮಿಥ್‌ನ್ನು ಒಡೆದು ಹೋರಾಡಬೇಕಾಗಿದೆ. ದೊಡ್ಡ ಅಣುಶಕ್ತಿಗಳು, ದೊಡ್ಡ ಅಣೆಕಟ್ಟುಗಳು, ದೊಡ್ಡ ದೊಡ್ಡ ವಿಚಾರಧಾರೆಗಳು, ದೊಡ್ಡ ವಿರೋಧಾಭಾಸಗಳು, ದೊಡ್ಡ ದೇಶಗಳು, ದೊಡ್ಡ ಯುದ್ಧಗಳು, ದೊಡ್ಡ ನಾಯಕರು, ದೊಡ್ಡ ತಪ್ಪುಗಳು ಇಂತಹ 'ದೊಡ್ಡ' ಎನ್ನುವಂತಹ ಕಲ್ಪನೆಯ ವಿರುದ್ಧವೇ ನಾವು ಹೋರಾಟ ನಡೆಸಬೇಕಾಗಿದೆ. ಈ ಸಂದರ್ಭ, ಶತಮಾನ ಸಣ್ಣದಿರಬಹುದು. ಹಾಗಾಗಿ ಚಿಕ್ಕ, ಚಿಕ್ಕದ್ದಕ್ಕಾಗಿಯೇ ನಾವು ಹೋರಾಟ ನಡೆಸಬೇಕಾಗಿದೆ.

ಸ್ವಾತಂತ್ರ್ಯ ಪಡೆದ 50 ವರುಷಗಳ ಹಂತದಲ್ಲಿ "ಅಣೆಕಟ್ಟುಗಳು ಆಧುನಿಕ ಭಾರತದ ದೇವಾಲಯಗಳು" ಎಂಬ ನೆಹರೂರವರ ಮಾತನ್ನು ನಂಬಿಕೊಂಡಂತೆ ಅನೇಕ ರಾಜಕಾರಣಿಗಳು ಈ ಅಣೆಕಟ್ಟು ಕಟ್ಟುವ ವ್ಯವಹಾರಕ್ಕೆ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ. ಅಣೆಕಟ್ಟು ಕಟ್ಟುವುದೆಂದರೆ ಈ ದೇಶವನ್ನು ಕಟ್ಟುವುದಕ್ಕೆ ಸಮನಾದ್ದು ಎಂಬ ಉತ್ಸಾಹದಿಂದಲೇ ಕೆಲಸ ಮಾಡತೊಡಗಿದ್ದಾರೆ. ಇವರು ಬರಿ ಹೊಸ ಅಣೆಕಟ್ಟು, ಹೊಸ ವ್ಯವಸಾಯ ಪದ್ಧತಿ ಸೃಷ್ಟಿಸಿದ್ದಷ್ಟೇ ಅಲ್ಲ, ಜೊತೆಗೆ ಅವರು ಸಾಂಪ್ರದಾಯಿಕ ಹಾಗೂ ಸಣ್ಣ ಉದ್ಯೋಗ ಪದ್ಧತಿಗಳ ಮೇಲೆ ತಮ್ಮ ಹಿಡಿತವನ್ನು ಸಾಧಿಸಿಬಿಟ್ಟಿದ್ದಾರೆ. ಇದನ್ನು ಸರಿಪಡಿಸಲೆಂಬಂತೆ ದೊಡ್ಡ, ದೊಡ್ಡ ಅಣೆಕಟ್ಟುಗಳನ್ನು ಕಟ್ಟತೊಡಗಿದ್ದಾರೆ. ಇಂದು ಭಾರತ ಅಣೆಕಟ್ಟು ಕಟ್ಟುವ ವಿಚಾರದಲ್ಲಿ ಪ್ರಪಂಚದಲ್ಲಿ ಮೂರನೆಯ ಸ್ಥಾನವನ್ನು ಹೊಂದಿದೆ. ಕೇಂದ್ರದ ನೀರಿನ ಕಮಿಷನ್ ಪ್ರಕಾರ ನಮ್ಮಲ್ಲಿ ದೊಡ್ಡ ಎಂದು ಹೇಳಬಹುದಾದ 3,600 ಅಣೆಕಟ್ಟುಗಳಿವೆ. 3,300 ಅಣೆಕಟ್ಟುಗಳು ಸ್ವಾತಂತ್ರ್ಯದ ನಂತರ ಕಟ್ಟಲ್ಪಟ್ಟವುಗಳು. 1,000 ಅಣೆಕಟ್ಟುಗಳು ಈಗ ಸಿದ್ಧವಾಗುವ ಹಂತದಲ್ಲಿಯೇ ಇವೆ. ಆದಾಗ್ಯೂ 200 ಮಿಲಿಯನ್ ಜನರಿಗೆ ಕುಡಿಯುವ ನೀರಿನ ವ್ಯವಸ್ಥೆ ಇಲ್ಲ, 600 ಮಿಲಿಯನ್ ಜನರಿಗೆ ಮೂಲಭೂತವಾದ ಸ್ವಚ್ಛತೆಯ ವ್ಯವಸ್ಥೆಯೇ ಇಲ್ಲ.

ಒಂದು ಕಾಲದಲ್ಲಿ ದೊಡ್ಡ ಅಣೆಕಟ್ಟುಗಳು ಒಳ್ಳೆಯದಾಗಿಯೇ ಪ್ರಾರಂಭವಾಗಿದ್ದವು. ಆದರೆ ಕೆಟ್ಟ ಪರಿಣಾಮಗಳನ್ನು ಬೀರಿದವು. ಇಡಿಯ ಪ್ರಪಂಚದಲ್ಲಿ ದೊಡ್ಡ ಅಣೆಕಟ್ಟಿನ ವಿರುದ್ಧ ದೊಡ್ಡ ಆಂದೋಲನವೇ ನಡೆಯತೊಡಗಿದೆ. ಮೊದಲನೇ ರಾಷ್ಟ್ರಗಳಲ್ಲಿ ಅಣೆಕಟ್ಟುಗಳಿಗೆ ಸಿಡಿಮದ್ದು ಇಟ್ಟು ಒಡೆದುಹಾಕಲಾಗುತ್ತಿದೆ. ದೊಡ್ಡ ಅಣೆಕಟ್ಟುಗಳು - ಪ್ರಜಾಪ್ರಭುತ್ವದ ವಿರೋಧಿ ಎಂದು ಇಂದು ಪರಿಗಣಿಸಲಾಗುತ್ತಿದೆ. ಸರ್ಕಾರ ಈ ಮೂಲಕ ಪ್ರಭುತ್ವ ಸಾಧಿಸಲು ಪ್ರಯತ್ನಿಸುತ್ತದೆ. ರೈತ ಸಮುದಾಯದ ಬುದ್ಧಿ ಶಕ್ತಿಯನ್ನು ಕಸಿದುಕೊಂಡುಬಿಡುತ್ತಿದೆ. ನೀರು, ಭೂಮಿ ಹಾಗೂ ವ್ಯವಸಾಯವನ್ನು ಬಡಜನರಿಂದ ಈ ಮೂಲಕ ಕಸಿದುಕೊಳ್ಳಲಾಗುತ್ತಿದೆ. ಈ ಅಣೆಕಟ್ಟುಗಳು ದೊಡ್ಡ ಜನಸಮುದಾಯವನ್ನು ಸ್ಥಳಾಂತರಗೊಳಿಸುತ್ತದೆ. ಅವರನ್ನು ಬೀದಿಪಾಲು ಮಾಡಲಾಗುತ್ತದೆ. ಹಾಗಾಗಿ ದೊಡ್ಡ ದೊಡ್ಡ ಅಣೆಕಟ್ಟುಗಳು ನಾಗರೀಕತೆಯ ಅಥವಾ ಆಧುನಿಕತೆಯ ಸಂಕೇತವಾಗಿ ಇಂದು ಉಳಿದಿಲ್ಲ.

ಸ್ಥಳೀಯ ನೋವು ರಾಷ್ಟ್ರೀಯ ಲಾಭಕ್ಕೋಸ್ಕರ ಎನ್ನುವ ಕಲ್ಪನೆ ಚೂರು ಚೂರಾಗಿರುವ ಕಾರಣದಿಂದಾಗಿಯೇ ಪ್ರಥಮ ಜಗತ್ತಿನಲ್ಲಿ ಅಣೆಕಟ್ಟು ಕಟ್ಟುವ ಕೈಗಾರಿಕೋದ್ಯಮ ಕ್ಲಿಷ್ಟಕರ ಪರಿಸ್ಥಿತಿ ಎದುರಿಸುತ್ತಿದೆಯಲ್ಲದೇ, ಕೆಲಸವಿಲ್ಲದೇ ಕಾಲ ಕಳೆಯಬೇಕಾಗಿದೆ. ಹಾಗಾಗಿಯೇ 'ಅಭಿವೃದ್ಧಿ'ಯ ಹೆಸರಿನಲ್ಲಿ ಇದನ್ನು ಮೂರನೆಯ ಜಗತ್ತಿಗೆ ರವಾನಿಸಲಾಗುತ್ತಿದೆ. ಹಳೆಯ ಯುದ್ಧೋಪಕರಣಗಳು, ವಿಮಾನಗಳು ಹಾಗೂ ನಿಷೇಧಿಸಲ್ಪಟ್ಟ ಗೊಬ್ಬರಗಳ ಜೊತೆ ಈಗ ದೊಡ್ಡ ಅಣೆಕಟ್ಟುಗಳ ಯೋಜನೆಗೆ ಹಣ ಸಹಾಯವನ್ನು ರವಾನಿಸಲಾಗುತ್ತಿದೆ. ಈ ಹಣ ಸಹಾಯ ವ್ಯವಹಾರದಲ್ಲಿ ಇನ್ನೊಂದು ಮುಖ ಅಷ್ಟೇ. ವಸಾಹತುಶಾಹಿಯ ಹಾಗೆಂಬೇ ಇದೂ ಕೂಡಾ. ಈ ಮೂಲಕ ಆಫ್ರಿಕ ಸಂಪೂರ್ಣವಾಗಿ ನಿಸ್ಸಾರಗೊಂಡಿದೆ. ಬಾಂಗ್ಲಾದೇಶ ನಿಸ್ಸಾರವಾಗತೊಡಗಿದೆ. ಆದಾಗ್ಯೂ ಭಾರತ ಹಣ ಸಹಾಯವನ್ನು ಸ್ವಾಗತಿಸತೊಡಗಿದೆ. ಒಂದು ವೈಯಕ್ತಿಕ ಉಪನ್ಯಾಸದಲ್ಲಿ ಎನ್. ಸಿ. ಸಕ್ಸೇನಾ ಯೋಜನಾಧಿಕಾರದ ಸೆಕ್ರೆಟರಿಯು 50 ಮಿಲಿಯನ್ ಜನರು ಸ್ಥಳಾಂತರಗೊಂಡಿದ್ದಾರೆ ಎಂದರು. ಇದರಲ್ಲಿ 57.6% ಆದಿವಾಸಿ ಜನರು. ಸರ್ದಾರ್ ಸರೋವರ್ ಅಣೆಕಟ್ಟಿನ ಸಂದರ್ಭದಲ್ಲಿ ಸ್ಥಳಾಂತರಗೊಂಡಿದ್ದಾರೆ. ಪರಿಶಿಷ್ಟ ಜಾತಿ ಹಾಗೂ ಹಿಂದುಳಿದ ಕಮಿಷನರ್ ಪ್ರಕಾರ 60% ಜನರು ಸ್ಥಳಾಂತರಗೊಂಡಿದ್ದಾರೆ. ಅಂದರೆ ಇವರು ಈಗ ರಾಷ್ಟ್ರದ ಒಳಿತಿಗಾಗಿ! ನೋವನ್ನು ಅನುಭವಿಸಬೇಕಾಗಿದೆ.

**ಅಣೆಕಟ್ಟುಗಳು ಹಾಗೂ ಸ್ಥಳಾಂತರಗೊಂಡ ಆದಿವಾಸಿಗಳು**

| ಅಣೆಕಟ್ಟಿನ ಹೆಸರು | ರಾಜ್ಯ | ಸ್ಥಳಾಂತರಗೊಳ್ಳುತ್ತಿರುವ ಜನರು | ಸ್ಥಳಾಂತರಗೊಂಡ ಆದಿವಾಸಿಗಳು ಶೇ |
|---|---|---|---|
| ಕರ್ಜನ್ | ಗುಜರಾತ್ | 11,600 | 100 |
| ಸರ್ದಾರ್ ಸರೋವರ್ | ಗುಜರಾತ್ | 200,000 | 57.6 |
| ಮಹೇಶ್ವರ್ | ಮಧ್ಯಪ್ರದೇಶ | 20,000 | 60 |
| ಬೋದ್‌ಘಾಟ್ | ಮಧ್ಯಪ್ರದೇಶ | 12,700 | 73.91 |
| ಇಕಾ | ಬಿಹಾರ್ | 30,800 | 80 |
| ಚಂಡಿಲ್ | ಬಿಹಾರ್ | 37,600 | 87.92 |
| ಕೋಯಲ್ ಕಾರೂ | ಬಿಹಾರ್ | 66,000 | 88 |
| ಮಹಿ ಬಜಾಜ್ ಸಾಗರ್ | ರಾಜಸ್ಥಾನ್ | 38,400 | 76.28 |
| ಪೋಲಾವರಂ | ಆಂಧ್ರಪ್ರದೇಶ | 150,000 | 52.90 |
| ಮೈಥಾನ್ ಹಾಗೂ ಪಂಚೆಟ್ | ಬಿಹಾರ್ | 93,874 | 56.46 |
| ಇಂದ್ರಾವತಿ ಮೇಲ್ಭಾಗ | ಒರಿಸ್ಸಾ | 18,500 | 89.20 |
| ಪೋಂಗ್ | ಹಿಮಾಚಲಪ್ರದೇಶ | 80,000 | 56.25 |
| ಇಂಚಾಮ್‌ಪಲ್ಲಿ | ಮಹಾರಾಷ್ಟ್ರ | 38,100 | 76,28 |
| ತಲ್‌ತುಲಿ | ಮಹಾರಾಷ್ಟ್ರ | 13,600 | 51.61 |
| ದಮನ್‌ಗಂಗಾ | ಗುಜರಾತ್ | 8,700 | 48.70 |
| ಬಾಕ್ರಾ | ಹಿಮಾಚಲಪ್ರದೇಶ | 36,00 | 34.76 |
| ಮಾಸನ್ ಅಣೆಕಟ್ಟು | ಬಿಹಾರ್ | 3,700 | 31.00 |
| ಉಕಾಯ್ ಅಣೆಕಟ್ಟು | ಗುಜರಾತ್ | 52,000 | 18.92 |

ಈ ಸ್ಥಳಾಂತರಗೊಂಡ ಮಿಲಿಯಾಂತರ ಜನರು ಇಂದು ಏನಾಗಿದ್ದಾರೆ? ಹೇಗೆ ಬದುಕುತ್ತಿದ್ದಾರೆ? ಅವರು ಹೇಗೆ ತಮ್ಮ ಜೀವನಾವಶ್ಯಕತೆಗಳಿಗಾಗಿ ಗಳಿಸುತ್ತಿದ್ದಾರೆ? ಯಾರಿಗೂ ಗೊತ್ತಿಲ್ಲ. ನಾಗಾರ್ಜುನಸಾಗರ ಅಣೆಕಟ್ಟಿನ ಯೋಜನೆಯಲ್ಲಿ

ಸ್ಥಳಾಂತರಗೊಂಡ ಆದಿವಾಸಿಗಳು ಪಾಶ್ಚಿಮಾತ್ಯ ಸಂಘಟನೆಗಳಿಗೆ ತಮ್ಮ ಮಕ್ಕಳನ್ನು ದತ್ತು ಕೊಡುವುದಕ್ಕಾಗಿ ಮಾರತೊಡಗಿದ್ದರು ಎಂಬ ವರದಿ ದಿನಪತ್ರಿಕೆಗಳಲ್ಲಿ ಪ್ರಕಟಗೊಂಡಿದೆ. ಸರ್ಕಾರ ಮಧ್ಯ ಪ್ರವೇಶಿಸಿ ಈ ಮಕ್ಕಳನ್ನು ಸಾರ್ವಜನಿಕ ಆಸ್ಪತ್ರೆಗಳಲ್ಲಿ ಇಟ್ಟರು. ಇದರಲ್ಲಿ ಆರು ಮಕ್ಕಳು ನಿರ್ಲಕ್ಷದಿಂದಾಗಿ ಸತ್ತುಹೋದವು. ಮರುವಸತಿಯ ಪ್ರಶ್ನೆ ಬಂದಾಗ ಸರ್ಕಾರದ ನಿಲುವುಗಳು ಸ್ಪಷ್ಟವಾಗಿಲ್ಲ. ಸ್ಥಳಾಂತರಗೊಂಡ ಅವಿದ್ಯಾವಂತ ಆದಿವಾಸಿ ಸರ್ಕಾರದಿಂದ ಹಣ ಪಡೆಯುವುದು ಎಷ್ಟು ಸುಲಭ! ಎಂಬುದನ್ನು ನಾವು ಊಹಿಸಬಹುದಾಗಿದೆ. ಸ್ಥಳಾಂತರಗೊಂಡ ಮಿಲಿಯಾಂತರ ಜನರು ಅಸ್ತಿತ್ವದಲ್ಲಿಯೇ ಇಲ್ಲ. ಚರಿತ್ರೆ ಬರೆಯಲ್ಪಟ್ಟಾಗಲೂ ಅದರಲ್ಲಿ ಅವರು ಇರುವುದಿಲ್ಲ. ಸ್ಥಳಾಂತರಗೊಂಡ ಜನರು ಉರುಳುವುದಕ್ಕೆ ಪ್ರಾರಂಭಿಸಿದರೆ ವಿಶ್ರಾಂತಿ ಸ್ಥಳವೆಂಬುದೇ ಇರುವುದಿಲ್ಲ ಅವರಿಗೆ. ದೊಡ್ಡ ದೊಡ್ಡ ಪಟ್ಟಣಗಳ ಕೊಳಚೆ ಪ್ರದೇಶಗಳಲ್ಲಿ ಕರಗಿಹೋಗಿ, ಕಟ್ಟಡ ಕಟ್ಟುವಲ್ಲಿ ಅಗ್ಗ ಬೆಲೆಯ ಕೆಲಸಗಾರರಾಗಿ ಕೊನೆಗೊಳ್ಳುತ್ತಾರೆ. ಇವರನ್ನು ಗ್ಯಾಸ್ ಚೇಂಬರ್‌ನಲ್ಲಾಗಲೀ ಅಥವಾ ಕಾನ್‌ಸನ್‌ಟ್ರೇಷನ್ ಕ್ಯಾಂಪ್‌ನಲ್ಲಾಗಲೀ ಕೊಂದಿಲ್ಲ ಅಷ್ಟೇ. ಆದರೆ ಅವರ ಮರುವಸತಿಯ ಬದುಕಿನಲ್ಲಿ ಬದುಕುತ್ತಲೇ ದಿನನಿತ್ಯ ಸಾಯುತ್ತಿರುತ್ತಾರೆ. ಅವರು ಗಣನೆಗೆ ಬರದ ನಿರಾಶ್ರಿತರು ಅಷ್ಟೇ.

ನರ್ಮದಾ, ಮಧ್ಯಪ್ರದೇಶದ ಶಾದೋಲ್ ಜಿಲ್ಲೆಯ ಅಮರ್‌ಕಂಟಕ್ ಪ್ರಸ್ಥಭೂಮಿಯಿಂದ 1,300 ಕಿಲೋಮೀಟರ್‌ತನಕ ಹರಿಯುತ್ತದೆ. ಇದು ಭಾರತದಲ್ಲಿಯೇ ಅತ್ಯಂತ ಫಲವತ್ತಾದ ವ್ಯವಸಾಯ ಭೂಮಿ. 25 ಮಿಲಿಯನ್ ಜನರು ಈ ನರ್ಮದಾ ಕಣಿವೆಯಲ್ಲಿ ವಾಸಿಸುತ್ತಿದ್ದಾರೆ, ಈ ಪರಿಸರದ ಜೊತೆ ನಿಕಟ ಸಂಬಂಧ ಹೊಂದಿರುವುದಲ್ಲದೇ, ಹಿಂದಿನಿಂದಲೂ ಒಬ್ಬರ ಮೇಲೊಬ್ಬರು ಅವಲಂಬಿತರಾಗಿ ಬದುಕುತ್ತಿದ್ದಾರೆ. ನರ್ಮದಾ 'ನೀರಿನ ಸಂಪನ್ಮೂಲ ಅಭಿವೃದ್ಧಿ'ಗಾಗಿ ಕಳೆದ 50 ವರ್ಷಗಳಿಂದಲೂ ಗುರಿಯಾಗಿದ್ದರೂ ಸಹ ಇತ್ತೀಚಿನ ದಿನದವರೆಗೆ ಅದನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳುವುದು ಅಥವಾ ಅದರ ಮೇಲೆ ಹಿಡಿತ ಸಾಧಿಸುವುದು ಸಾಧ್ಯವಾಗಿರಲಿಲ್ಲ. ಏಕೆಂದರೆ ಇದು ಮಧ್ಯಪ್ರದೇಶ, ಮಹಾರಾಷ್ಟ್ರ ಹಾಗೂ ಗುಜರಾತ್‌ನ ಮೂರು ರಾಜ್ಯಗಳಲ್ಲಿ ಹರಿಯುತ್ತದೆ. 90% ಮಧ್ಯ ಪ್ರದೇಶದಲ್ಲಿ ಹರಿದರೆ, ಮಹಾರಾಷ್ಟ್ರದ ಉತ್ತರ ಗಡಿಯನ್ನು ಮಾತ್ರ ಹಾದು ಹೋಗುತ್ತದೆ ಹಾಗೂ ಗುಜರಾತ್‌ನಲ್ಲಿ 180 ಮೀಟರ್ ಹರಿದು ನಂತರ ಭರುಚ್‌ನಲ್ಲಿ ಅರೇಬಿಯನ್ ಸಮುದ್ರ ಸೇರುತ್ತದೆ.

1946ರಲ್ಲಿಯೇ ಅಣೆಕಟ್ಟಿನ ಯೋಜನೆ ಗುಜರಾತ್ ರಾಜ್ಯದ ಗೋರಾ ಜಿಲ್ಲೆಯಲ್ಲಿ ನಡೆದಿತ್ತು. 1961ರಲ್ಲಿ ನೆಹರು 49.5 ಮೀಟರ್ ಎತ್ತರದ ಅಣೆಕಟ್ಟನ್ನು ಸರ್ದಾರ್ ಸರೋವರ್‌ಗೆ ಕಟ್ಟಲು ಅಡಿಪಾಯ ಹಾಕಿದರು. ಇದೇ ಸಂದರ್ಭದಲ್ಲಿ ಅಣೆಕಟ್ಟು ಯೋಜನಾಗಾರರು ದೊಡ್ಡ ಅಣೆಕಟ್ಟು ಕಟ್ಟುವುದು ಹೆಚ್ಚು ಪ್ರಯೋಜನಕಾರಿ ಎಂಬುದನ್ನು ಅಧ್ಯಯನದ ಮೂಲಕ ಕಂಡುಹಿಡಿದರು. ಆದರೆ ಮೂರು ರಾಜ್ಯಗಳು ನೀರಿನ ಹಂಚಿಕೆಯ ವಿಚಾರದಲ್ಲಿ ಒಪ್ಪಂದಕ್ಕೆ ಬರಲಿಲ್ಲ. ಹಾಗಾಗಿ 1969ರಲ್ಲಿ ಕೇಂದ್ರ ಸರ್ಕಾರ 'ನರ್ಮದಾ ವಾಟರ್ ಡಿಸ್‌ಪ್ಯೂಟ್ಸ್ ಟ್ರಿಬ್ಯುನಲ್' ಸ್ಥಾಪಿಸಿತು. ಟ್ರಿಬ್ಯುನಲ್ 10 ವರ್ಷದ ನಂತರ ಈ ಬಗ್ಗೆ ನಿರ್ಧಾರ ತೆಗೆದುಕೊಂಡು ಸಲಹೆ ನೀಡಿತು. ಹಾನಿಗೊಳಗಾಗಬಹುದಾದ ಜನರಿಗೆ ಸುದ್ದಿಯನ್ನು ತಿಳಿಸಲಿಲ್ಲ. ಅವರನ್ನು ವಿಚಾರಿಸಲೂ ಇಲ್ಲ ಹಾಗೂ ಈ ಬಗ್ಗೆ ಜನರನ್ನು ಕತ್ತಲೆಯಲ್ಲಿಯೇ ಇಡಲಾಯಿತು.

ನರ್ಮದಾ ನದಿಯಲ್ಲಿ ಎಷ್ಟು ನೀರು ಇರುತ್ತದೆ ಎಂಬುದನ್ನು 40 ವರ್ಷಗಳ ವರದಿಗಳಿಂದ ಕಂಡುಹಿಡಿಯಬೇಕಾಗಿತ್ತು. ಇದು ದೊರೆಯದ ಕಾರಣ ಮಳೆಯ ಮೇಲೆಯೇ ನೀರು ಎಷ್ಟಿರಬಹುದು ಎಂಬುದನ್ನು ಲೆಕ್ಕ ಹಾಕಿ ನರ್ಮದಾ ಕಣಿವೆಯಲ್ಲಿ ಅಣೆಕಟ್ಟಿನ ಯೋಜನೆಗೆ ಟ್ರಿಬ್ಯುನಲ್ ಒಪ್ಪಿಗೆ ಸಲ್ಲಿಸಿತು. ಟ್ರಿಬ್ಯುನಲ್ ಹೇಳಿದ 27.22 ಮಿಲಿಯನ್ ಎಕರೆಯ ಲೆಕ್ಕದ ನೀರು ನರ್ಮದಾ ನದಿಯಲ್ಲಿ ಇಲ್ಲವೇ ಇಲ್ಲ. ಆದರೆ ಸರ್ಕಾರ ಟ್ರಿಬ್ಯುನಲ್ ಹೇಳಿಕೆಯ ಮೇಲೆಯೇ ಒತ್ತು ನೀಡುತ್ತದೆ. ಮಾನವ ಚರಿತ್ರೆಯಲ್ಲಿ ನರ್ಮದಾ ಕಣಿವೆಯ ಅಣೆಕಟ್ಟು ಯೋಜನೆ ಅತ್ಯಂತ ಮಹಾತ್ವಾಕಾಂಕ್ಷೆ ಉಳ್ಳದ್ದಾಗಿದೆ. ಇಲ್ಲಿ 3,200 ಅಣೆಕಟ್ಟು ಕಟ್ಟುವ ಯೋಜನೆ ಇದೆ. ಇದರಲ್ಲಿ 30 ದೊಡ್ಡವು, 135 ಮಧ್ಯಮ ರೀತಿಯವು, ಉಳಿದವುಗಳು ಚಿಕ್ಕ ಅಣೆಕಟ್ಟುಗಳು. ಎರಡು ಅತ್ಯಂತ ದೊಡ್ಡ ಅಣೆಕಟ್ಟುಗಳು ಅನೇಕ ಉದ್ದೇಶಗಳಿಗಾಗಿ ಕಟ್ಟಲ್ಪಡುವವು. ಇವು ಗುಜರಾತಿನ ಸರ್ದಾರ್ ಸರೋವರ್ ಹಾಗೂ ಮಧ್ಯ ಪ್ರದೇಶದ ನರ್ಮದಾ ಸಾಗರ್. ಇವೆರಡು ಭಾರತದ ಉಪಖಂಡಗಳ್ಯಾವುವೂ ಶೇಖರಿಸಲಾರದಷ್ಟು ನೀರನ್ನು ಈ ಅಣೆಕಟ್ಟುಗಳು ಶೇಖರಿಸಿ ಇಡುವುವು ಎಂದು ಭಾವಿಸಲಾಗಿದೆ.

ಹೀಗೆ ನೋಡಿದಾಗ ನರ್ಮದಾ ಕಣಿವೆಯ ಅಣೆಕಟ್ಟು ಯೋಜನೆ ಅತ್ಯಂತ ದೊಡ್ಡ ಯೋಜನೆ. ಇದು ಭಾರತದ ದೊಡ್ಡ

ದೊಡ್ಡ ನದಿಗಳ ಪರಿಸರವನ್ನೇ ಬದಲಾವಣೆ ಮಾಡಿಬಿಡುತ್ತದೆ. ಈ ಕಣಿವೆಯ ಭಾಗದಲ್ಲಿ ವಾಸಿಸುವ 25 ಮಿಲಿಯನ್ ಜನರ ಬದುಕನ್ನೇ ಇಂದು ಕಸಿದುಕೊಂಡುಬಿಡುತ್ತದೆ. ಹಾಗಿದ್ದಾಗ್ಯೂ ಪರಿಸರ ಖಾತೆ ಈ ಯೋಜನೆಯ ಬಗ್ಗೆ ಸಮ್ಮತಿ ನೀಡುವ ಮೊದಲೇ ವಿಶ್ವಬ್ಯಾಂಕ್ ಈ ಯೋಜನೆಗೆ ಸಾಲ ನೀಡಲೂ ಸಮ್ಮತಿಸಿ ಆಗಿತ್ತು. ಇದರಿಂದ ಪರಿಸರ ಅಥವಾ ಮನುಷ್ಯರ ಜೀವನದ ಮೇಲೆ ಆಗುವ ನಷ್ಟವನ್ನು ವಿಶ್ವಬ್ಯಾಂಕ್ ಪರಿಗಣಿಸಲೇ ಇಲ್ಲ. 450 ಮಿಲಿಯನ್ ಡಾಲರ್ ಸಾಲವು ಸರ್ದಾರ್ ಸರೋವರ್ ಯೋಜನೆಗಾಗಿ 1985ರಲ್ಲಿ ವಿಶ್ವಬ್ಯಾಂಕ್‌ನಿಂದ ಭಾರತಕ್ಕೆ ದೊರೆಯಿತು. ಪರಿಸರ ಖಾತೆಯು 1987ರಲ್ಲಿ ಈ ಯೋಜನೆಗೆ ಸಮ್ಮತಿ ನೀಡಿತ್ತು. ಈ ವಿರೋಧಾಭಾಸ ಕುರಿತು ಯೋಚಿಸುವ ಅಗತ್ಯ ಯಾರಿಗಿತ್ತು?

1979ರಲ್ಲಿ ಸರ್ದಾರ್ ಸರೋವರ್ ಅಣೆಕಟ್ಟು ಯೋಜನೆ 6,000 ಕುಟುಂಬಗಳನ್ನು ಸ್ಥಳಾಂತರಗೊಳಿಸುತ್ತದೆ ಎಂದು ಹೇಳಲಾಗಿತ್ತು. 1987ರಲ್ಲಿ ಈ ಸಂಖ್ಯೆ 12,000ಕ್ಕೆ, 1991ರಲ್ಲಿ 27,000ಕ್ಕೆ, 1992ರಲ್ಲಿ 40,000ಕ್ಕೆ ಹಾಗೂ ಇಂದು ಈ ಸಂಖ್ಯೆ 40,000 ಹಾಗೂ 41,500 ಸಂಖ್ಯೆಗೆ ಏರಿದೆ. ಸರ್ಕಾರದ ಪ್ರಕಾರ ಸರ್ದಾರ್ ಸರೋವರ್ ಯೋಜನೆಯು 1450 ಮೆಗಾ ವ್ಯಾಟ್ಸ್ ವಿದ್ಯುಚ್ಛಕ್ತಿ ಶಕ್ತಿಯನ್ನು ಉತ್ಪಾದಿಸುತ್ತದೆ ಎಂದು ಹೇಳುತ್ತದೆ. ಸರ್ದಾರ್ ಸರೋವರ್ ಯೋಜನೆಯನ್ನು ವಿವಿಧ ಉದ್ದೇಶಗಳಿಗಾಗಿ ಬಳಸಬಹುದಾಗಿದೆ ಎಂದೂ ಕೂಡ ಹೇಳಲಾಗುತ್ತಿದೆ. ವ್ಯವಸಾಯಕ್ಕೆ, ಶಕ್ತಿ ಉತ್ಪಾದನೆಗೆ ಹಾಗೂ ಪ್ರವಾಹವನ್ನು ತಡೆಗಟ್ಟುವ ಉದ್ದೇಶಗಳಿಗಾಗಿ ಬಳಸಬಹುದು ಎಂದು ಸರ್ಕಾರ ಹೇಳುತ್ತದೆ. ಆದರೆ ಈ ಉದ್ದೇಶಗಳೇ ಒಂದಕ್ಕೊಂದು ವಿರೋಧಾಭಾಸ/ವೈರುಧ್ಯ ಹೊಂದಿವೆ. ವ್ಯವಸಾಯ, ವಿದ್ಯುಚ್ಛಕ್ತಿಗಾಗಿರುವ ನೀರನ್ನು ಬಳಸಿಕೊಳ್ಳುತ್ತದೆ. ಪ್ರವಾಹ ತಡೆಗಟ್ಟುವ ಉದ್ದೇಶಕ್ಕಾಗಿ ಅಣೆಕಟ್ಟೆನಲ್ಲಿ ಮಾನ್‌ಸೂನ್ ತಿಂಗಳಲ್ಲಿ ನೀರಿಲ್ಲದೆ ಖಾಲಿ ಇಡಬೇಕಾಗುತ್ತದೆ. ನೀರಿನ ಪ್ರಮಾಣ ಜಾಸ್ತಿ ಬರದಿದ್ದರೆ, ಉಳಿಯುವುದು ಖಾಲಿ ಅಣೆಕಟ್ಟು ಮಾತ್ರ. ಆಗ ವ್ಯವಸಾಯದ ಉದ್ದೇಶವೇ ಬಿದ್ದು ಹೋಗುತ್ತದೆ. ಹಾಗಾಗಿ ಉದ್ದೇಶಗಳೇ ಒಂದಕ್ಕೊಂದು ವಿರೋಧಾಭಾಸಗಳಿಂದ ಕೂಡಿವೆ ಎಂದು ಈ ಬಗ್ಗೆಗಿನ ಅಧ್ಯಯನಗಳು ತಿಳಿಸುತ್ತವೆ.

1990ರಲ್ಲಿ ಜಬಲ್‌ಪುರ ಹತ್ತಿರ ನರ್ಮದಾ ನದಿಯಲ್ಲಿ ಬಾರ್ಗಿ ಅಣೆಕಟ್ಟನ್ನು ಮೊದಲನೆಯದಾಗಿ ಕಟ್ಟಲಾಯಿತು. ಎಣಿಸಿದ ಬಜೆಟ್‌ಗಿಂತ 10 ಪಾಲು ಜಾಸ್ತಿ ಹಣ ಇದಕ್ಕೆ ಖರ್ಚಾಯಿತು. ಎಣಿಸಿದ ಭೂಮಿಗಿಂತ ಮೂರು ಪಟ್ಟು ಹೆಚ್ಚು ಭೂಮಿ ಈ ಅಣೆಕಟ್ಟಿನ ಪಾಲಾಯಿತು. 101 ಹಳ್ಳಿಗಳಿಂದ 70,000 ಜನ ಸ್ಥಳಾಂತರಗೊಂಡರು. 162 ಹಳ್ಳಿಗಳು ಅಣೆಕಟ್ಟೆಗೆ ಸೇರಿದವು. ಸರ್ಕಾರ ಕಲ್ಪಿಸಿದ ಮರುವಸತಿ ಪ್ರದೇಶಗಳೂ ಸಹ ಅಣೆಕಟ್ಟೆಗೆ ಸೇರಿದವು. ನಂತರದಲ್ಲಿ 114,000 ಜನ ಸ್ಥಳಾಂತರಗೊಂಡರು. ಮರುವಸತಿಗೆ ಸಂಬಂಧಿಸಿದ ಸ್ಪಷ್ಟವಾದ ಪಾಲಿಸಿಯೇ ಇರಲಿಲ್ಲ. ಕೆಲವರು ಹಣ ಪಡೆದರೂ, ಕೆಲವರಂತೂ ಏನನ್ನೂ ಪಡೆಯಲಿಲ್ಲ. ಕೆಲವು ಮಂದಿ ಮಾತ್ರ ಸರ್ಕಾರದ ಮರುವಸತಿ ಪ್ರದೇಶಕ್ಕೆ ಹೋದರು. ಗೋರಕ್‌ಪುರದ ಮರುವಸತಿ ಸ್ಥಳ ಮಾದರಿಯುತವಾದದ್ದು ಎಂದು ಸರ್ಕಾರ ಹೇಳಿಕೊಂಡಿತು. 1990 ಹಾಗೂ 92ರ ಮಧ್ಯದಲ್ಲಿ 5 ಜನರು ಗೋರಕ್‌ಪುರದ ಮರುವಸತಿ ಪ್ರದೇಶದಲ್ಲಿ ಹಸಿವಿನಿಂದ ಸತ್ತು ಹೋದರು. ಉಳಿದವರು ಅಣೆಕಟ್ಟಿನ ಹತ್ತಿರದ ಕಾಡಿಗೆ ನುಸುಳಿದರು ಅಥವಾ ಜಬಲ್‌ಪುರದ ಕೊಳಚೆ ಪ್ರದೇಶಕ್ಕೆ ವಲಸೆ ಹೋದರು. ಅಣೆಕಟ್ಟಿನ ಪಾಲಾದ ಭೂಮಿಯಷ್ಟೇ ಭಾಗದ ಭೂಮಿಯನ್ನು ಇಲ್ಲಿ ಈಗ ವ್ಯವಸಾಯ ಮಾಡಲಾಗುತ್ತಿದೆ. ಅದರಲ್ಲೂ ಶೇಕಡಾ 5 ಭಾಗವನ್ನು ಮಾತ್ರ ವ್ಯವಸಾಯ ಮಾಡಲಾಗುತ್ತದೆ ಎಂದು ಅಣೆಕಟ್ಟಿನ ಯೋಜನಾಗಾರರು ಹೇಳುತ್ತಿದ್ದಾರೆ. ಅಣೆಕಟ್ಟಿನ ಪರಿಣಾಮಗಳು - ಇದರಿಂದ ಹೆಚ್ಚು ಸ್ಪಷ್ಟವಾಗತೊಡಗಿವೆ.

ಸರ್ದಾರ್ ಸರೋವರ್ ಅಣೆಕಟ್ಟು ಯೋಜನೆ 1961ರಿಂದಲೇ ಪ್ರಾರಂಭವಾಗಿದ್ದರೂ ಸಹ 1988ರಲ್ಲಿ ಹೆಚ್ಚು ತೀವ್ರಗತಿಯಲ್ಲಿ ಅಣೆಕಟ್ಟಿನ ಕೆಲಸ ಮುಂದುವರಿಯತೊಡಗಿತ್ತು. ಈ ಸಂದರ್ಭದಲ್ಲಿಯೇ ಮೇಧಾಪಾಟ್ಕರ್ ಈ ಪ್ರದೇಶದ ಸುತ್ತ ಓಡಾಡಿ ಜನರಿಗೆ ಈ ಅಣೆಕಟ್ಟಿನ ಬಗ್ಗೆ, ಅದರ ಪರಿಣಾಮದ ಬಗ್ಗೆ ಅರಿವಿದೆಯೇ ಎಂಬುದನ್ನು ಚರ್ಚಿಸತೊಡಗಿದ್ದರು. ಆಗ ಅವರ ಉದ್ದೇಶ ಅಣೆಕಟ್ಟು ಕಟ್ಟುವುದನ್ನು ವಿರೋಧಿಸುವುದಾಗಿರಲಿಲ್ಲ. ಬದಲಾಗಿ ಸ್ಥಳಾಂತರಗೊಳ್ಳುವ ಆದಿವಾಸಿಗಳು, ಹಳ್ಳಿಗರು ನ್ಯಾಯಬದ್ಧವಾಗಿ ಮರುವಸತಿ ಪಡೆಯಬೇಕೆಂಬುದು ಮಾತ್ರ ಅವರ ಉದ್ದೇಶವಾಗಿತ್ತು. 1986ರ ಹೊತ್ತಿಗೆ ಈ ಬಗ್ಗೆ ತಿಳುವಳಿಕೆ ಮೂಡುತ್ತಾ ಹೋದ ಹಾಗೆ ಪ್ರತಿ ರಾಜ್ಯದಲ್ಲಿ ಜನರ ಸಂಘಟನೆಗಳು ಬೆಳೆಯತೊಡಗಿ - ಮರುವಸತಿಯ ಬಗ್ಗೆ ಸರ್ಕಾರವನ್ನು ಪ್ರಶ್ನಿಸತೊಡಗಿದರು. ನಂತರದ ವರ್ಷಗಳಲ್ಲಿ ಅಣೆಕಟ್ಟು ಯೋಜನೆಯ ದುಷ್ಪ ಪರಿಣಾಮಗಳ ಬಗ್ಗೆ ಜನರಲ್ಲಿ ಪೂರ್ಣ ತಿಳುವಳಿಕೆ ಮೂಡತೊಡಗಿತು. ನರ್ಮದಾ ಕಣಿವೆಯ ಅಭಿವೃದ್ಧಿ ಯೋಜನೆಯು ಪರಿಸರದ ವಿನಾಶದ ಯೋಜನೆ ಎಂಬ ಗ್ರಹಿಕೆ ಜನರಲ್ಲಿ ಬಲವಾಗಿ ಮೂಡತೊಡಗಿತು. ಹಾಗಾಗಿಯೇ ಎಲ್ಲಾ ಜನರ ಸಂಘಟನೆಗಳೂ ಒಂದಾಗಿ 'ನರ್ಮದಾ ಬಚಾವ್ ಆಂದೋಲನ್' ಜನ್ಮ ತಾಳಿತು.

1988ರಲ್ಲಿ ನರ್ಮದಾ ಬಚಾವ್ ಆಂದೋಲನ ನರ್ಮದಾ ಕಣಿವೆಯ ಅಭಿವೃದ್ಧಿ ಯೋಜನೆಯ ಕೆಲಸ ನಿಲ್ಲಿಸಬೇಕೆಂದು ಕರೆಕೊಟ್ಟಿತು. ತಮ್ಮ ಮನೆಗಳಿಂದ ಹೋಗುವುದಕ್ಕಿಂತ ತಾವು ಮುಳುಗುವುದಕ್ಕೆ ಸಿದ್ಧರೆಂದು ಜನ ಪ್ರತಿಭಟಿಸತೊಡಗಿದರು. 1989ರಲ್ಲಿ ಹರ್‌ಸುಂದ್ ಕಣಿವೆಯ ಬಳಿ 50,000 ಜನ ಈ ವಿನಾಶಕಾರಿ ಅಭಿವೃದ್ಧಿ ಯೋಜನೆಯನ್ನು ವಿರೋಧಿಸುವುದಾಗಿ ಪಣತೊಟ್ಟರು. ಅಣೆಕಟ್ಟು ಸ್ಥಳಗಳ ಹತ್ತಿರ ಸರ್ಕಾರ 144ಸೆಕ್ಷನ್ ಜಾರಿಗೆ ತಂದಿತು. 1990ರಲ್ಲಿ ಸಾವಿರಾರು ಹಳ್ಳಿಗರು ಬಾದ್‌ವಾನಿ ಹತ್ತಿರ ಮತ್ತೆ ಮನೆಗಳನ್ನು ತೊರೆಯುವುದಕ್ಕಿಂತ ಮುಳುಗುವುದಾಗಿ ಪಣತೊಟ್ಟರು. ಜಪಾನ್‌ನಲ್ಲಿ 'ಫ್ರೆಂಡ್ಸ್ ಆಫ್ ದಿ ಅರ್ಥ್' ಸಂಘಟನೆಯು ಈ ಬಗ್ಗೆ ಹೋರಾಡಿ ಜಪಾನ್ ಸರ್ಕಾರವು ಸರ್ದಾರ್ ಸರೋವರ್ ಯೋಜನೆಗೆ ನೀಡಿದ್ದ 27 ಬಿಲ್ಲಿಯನ್ ಯನ್‌ನ್ನು ವಾಪಸ್ಸು ಪಡೆಯುವಂತೆ ಮಾಡಿತು. ಜಪಾನ್ ವಾಪಸ್ಸಾದ ನಂತರ ಜಗತ್ತಿನ ಪರಿಸರ ಪ್ರೇಮಿಗಳು ಹಾಗೂ ಅವರ ಸಂಘಟನೆಗಳು ವಿಶ್ವಬ್ಯಾಂಕಿನ ಮೇಲೆ ಒತ್ತಡ ಹೇರತೊಡಗಿದವು.

ಸರ್ಕಾರ ಜನರ ಆಂದೋಲನವನ್ನು ಹತ್ತಿಕ್ಕಲು ಪ್ರಾರಂಭಿಸಿತು. 1990ರಲ್ಲಿ 6,000 ಜನ, 1991ರಲ್ಲಿ 7 ಜನರನ್ನೊಳಗೊಂಡ ಜನ ಪ್ರತಿಭಟನೆಯನ್ನು ಮುಂದುವರಿಸಿದರು. 7 ಜನವರಿ 1991ರಲ್ಲಿ ಜನರ ಗುಂಪು ಅನಿರ್ದಿಷ್ಟ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿತು. ಇದಕ್ಕೆ ಮಣಿದು ವಿಶ್ವಬ್ಯಾಂಕ್ ಸರ್ದಾರ್ ಸರೋವರ್ ಯೋಜನೆಯ ಮರು ಅವಲೋಕನಕ್ಕಾಗಿ ಸ್ವತಂತ್ರ ಕಮಿಟಿ ಸ್ಥಾಪಿಸುವುದಾಗಿ ಒಪ್ಪಿಕೊಂಡಿತು. 28 ಜನವರಿಯಂದು ಅಂದರೆ 22 ದಿನದ ಬಳಿಕ ಈ 7 ಜನರು ಫರೂಕಾದಲ್ಲಿನ ತಮ್ಮ ಉಪವಾಸ ಸತ್ಯಾಗ್ರಹವನ್ನು ಮುರಿದರು.

1991ರ ಜೂನ್‌ನಲ್ಲಿ ವಿಶ್ವಬ್ಯಾಂಕ್ ಬ್ರಾಡ್‌ಫೋರ್ಡ್ ಮೋರ್ಸ್‌ರ ನೇತೃತ್ವದಲ್ಲಿ ಒಂದು ಸ್ವತಂತ್ರ ಅವಲೋಕನ ಕಮಿಟಿಯನ್ನು ನಿಯಮಿಸಿತು. 1992ರ ಜೂನ್‌ನಲ್ಲಿ ಕಮಿಟಿ ವರದಿಯನ್ನು ಸಲ್ಲಿಸಿತು. ಈ ವರದಿ 'ಮೋರ್ಸ್ ವರದಿ' ಎಂದೇ ಹೆಸರಾಗಿದೆ. ಈ ಕಮಿಟಿ ಸರ್‌ದಾರ್ ಸರೋವರ್ ಯೋಜನೆ ತಪ್ಪುಗಳಿಂದ ಕೂಡಿದೆ. ಇರುವ ವಾಸ್ತವ ಸ್ಥಿತಿಯಲ್ಲಿ ಸ್ಥಳಾಂತರಗೊಂಡ ಜನರಿಗೆ ಮರುವಸತಿ ಸಾಧ್ಯವಾಗುವುದಿಲ್ಲ. ಪರಿಸರದ ಪ್ರಭಾವ ಕುರಿತು ಈ ಯೋಜನೆ ಏನನ್ನೂ ಪರಿಗಣಿಸಿಲ್ಲ. ಹಾಗಾಗಿ ಮಾನವ ಹಾಗೂ ಪರಿಸರ ತೆತ್ತಬೇಕಾದ ಬೆಲೆ ಕುರಿತು ಯೋಚಿಸದೇ ಈ ಯೋಜನೆ ಮುಂದುವರಿಸುವುದು ಒಳ್ಳೆಯದಲ್ಲ. ಯೋಜನೆಗಳಲ್ಲಿಯೇ ತಪ್ಪುಗಳಿರುವುದರಿಂದ ಯಾವುದೇ ರೀತಿಯ ಸಲಹೆಗಳನ್ನು ಸೂಚಿಸುವುದೂ ಸರಿಯಲ್ಲ. ಆದ್ದರಿಂದ ವಿಶ್ವಬ್ಯಾಂಕ್ ಈ ಯೋಜನೆಗಳಿಂದ ಹಿಂದೆ ಸರಿದು ಹೊಸದಾಗಿ ಯೋಚಿಸಬೇಕಾಗಿದೆ.

ಈ ವರದಿಯ ನಂತರವೂ ವಿಶ್ವಬ್ಯಾಂಕ್ ಹಿಂದೆ ಸರಿಯಲಿಲ್ಲ. ನಂತರ ಪಮೇಲಾ ಕಾಕ್ಸ್ ಕಮಿಟಿಯನ್ನು ಕಳುಹಿಸಲಾಯಿತು. ಈ ಕಮಿಟಿ ಮೋರ್ಸ್ ಕಮಿಟಿಯ ರೀತಿಯೇ ವರದಿಯನ್ನು ಸಲ್ಲಿಸಿತು. ಆದರೆ ಯೋಜನೆಗೆ ತೇಪೆ ಹಾಕಬಹುದಾದ ಒಂದು ಸಲಹೆಯನ್ನೂ ಸಹ ಸೂಚಿಸಿತು. ವಿಶ್ವಬ್ಯಾಂಕ್ 6 ತಿಂಗಳುಗಳೊಳಗಾಗಿ ಕೆಲವು ಅವಶ್ಯಕ, ಪ್ರಾಥಮಿಕ ಸೌಲತ್ತುಗಳನ್ನು ನೀಡಲು ಸೂಚಿಸಿತು. ಸರ್ಕಾರಕ್ಕೆ ಇದು ಸಾಧ್ಯವಾಗದಿದ್ದಾಗ 1993ರ ಮಾರ್ಚ್ 30ರಂದು ವಿಶ್ವಬ್ಯಾಂಕ್ ಸರ್ದಾರ್ ಸರೋವರ್ ಯೋಜನೆಗಳಿಂದ ಹಿಂದಕ್ಕೆ ಸರಿಯಿತು. ಇದು ಜನರ ಚಳುವಳಿಗೆ ಆದಿವಾಸಿ, ಪರಿಶಿಷ್ಟ ಜಾತಿ, ಪಂಗಡ ಹಾಗೂ ಇತರ ಜನರ ಬದುಕುವ ಹಕ್ಕಿಗೆ ಸಿಕ್ಕ ನೀತಿಯುಕ್ತ ಜಯವಾಗಿದೆ. ಆದರೆ ಅಣೆಕಟ್ಟಿನ ಕತೆ ಇಲ್ಲಿಗೆ ಮುಗಿಯಲಿಲ್ಲ. ಗುಜರಾತ್ ಸರ್ಕಾರ ಅಣೆಕಟ್ಟಿನ ಯೋಜನೆಯನ್ನು ಮುಂದುವರಿಸಿತು. ಜನರ ಹಾಗೂ ಸರ್ಕಾರಿ ಅಧಿಕಾರಿಗಳ ಮಧ್ಯೆ ಘರ್ಷಣೆಗಳು ಪ್ರಾರಂಭವಾದವು. ಮರುವಸತಿಗೆ ಹೋದ ಜನರೆಲ್ಲ ವಾಪಸ್ಸು ತಮ್ಮ ಹಳ್ಳಿಗೆ ಬರಲಾರಂಭಿಸಿದರು. 1993ರಲ್ಲಿ ಮನಿಬೆಲಿಯಲ್ಲಿ ನೀರು ಏರಿಬಂದಾಗಲೂ ಕೂಡಾ ಅಲ್ಲಿಯ ಕುಟುಂಬಗಳು ಮನೆಗಳಿಂದ ಕದಲಲಿಲ್ಲ. ಪೋಲೀಸರು ಅವರನ್ನು ಹೊರಕ್ಕೆ ಎಳೆದುಹಾಕಿದರು. ಸರ್ಕಾರವು ಈ ಯೋಜನೆ ಕುರಿತು ಅವಲೋಕಿಸಲು ಒಪ್ಪದಿದ್ದರೆ 1993ರ ಆಗಸ್ಟ್ 6ರಂದು ಮುಳುಗಿ ಸಾಯುವುದಾಗಿ ನರ್ಮದಾ ಬಚಾವ್ ಆಂದೋಲನದ ಕಾರ್ಯಕರ್ತರು ಸರ್ಕಾರಕ್ಕೆ ಎಚ್ಚರಿಕೆ ನೀಡಿದರು. ಆಗಸ್ಟ್ 5ರಂದು ಕೇಂದ್ರ ಸರ್ಕಾರ 5 ಜನರ ಕಮಿಟಿಯೊಂದನ್ನು ಈ ಯೋಜನೆಯ ಅವಲೋಕನಕ್ಕಾಗಿ ಸ್ಥಾಪಿಸಿತು. ಗುಜರಾತ್ ಸರ್ಕಾರ ಈ ಕಮಿಟಿ ಗುಜರಾತ್ ಪ್ರವೇಶಿಸುವುದಕ್ಕೆ ಒಪ್ಪಿಗೆ ನೀಡಲು ನಿರಾಕರಿಸಿತು. ಈ ಕಮಿಟಿಯೂ ಸಹ ಸ್ವತಂತ್ರ ಕಮಿಟಿಗಳ ಕಾಳಜಿಗಳನ್ನೇ ಎತ್ತಿ ಹಿಡಿಯಿತು. ಇದರಿಂದ ಗುಜರಾತ್ ಸರ್ಕಾರದ ಮೇಲೆ ಏನೂ ಪ್ರಭಾವ ಆಗಲಿಲ್ಲ.

ಮೇ 1994ರಂದು ನರ್ಮದಾ ಬಚಾವ್ ಆಂದೋಲನ, ಸರ್ದಾರ್ ಸರೋವರ್ ಯೋಜನೆಯ ಅಸ್ತಿತ್ವ ಕುರಿತು ಸುಪ್ರೀಂ

ಕೋರ್ಟ್‌ನಲ್ಲಿ ರಿಟ್ ಪೆಟಿಷನ್ ಮೂಲಕ ಪ್ರಶ್ನಿಸಿ ಕಟ್ಟಡದ ಕೆಲಸ ನಿಲ್ಲಿಸಬೇಕೆಂದು ಕೇಳಿಕೊಂಡಿತು. 1995ರ ಪ್ರಾರಂಭದಲ್ಲಿ ಸ್ಥಳಾಂತರಗೊಂಡ ಜನರ ಮರುವಸತಿ ಸರಿಯಾಗಿರದ ಕಾರಣ ಅಣೆಕಟ್ಟಿನ ಕೆಲಸವನ್ನು ಮುಂದಿನ ನೋಟಿಸ್ ಬರುವತನಕ ನಿಲ್ಲಿಸಬೇಕೆಂದು ಸುಪ್ರೀಂ ಕೋರ್ಟ್ ಆದೇಶ ನೀಡಿತು.

ಈ ಸಂದರ್ಭದಲ್ಲಿ ಮಧ್ಯ ಪ್ರದೇಶದಲ್ಲಿ ನರ್ಮದಾ ಸಾಗರ್ ಹಾಗೂ ಮಹೇಶ್ವರ್ ಅಣೆಕಟ್ಟುಗಳ ಕೆಲಸ ಪ್ರಾರಂಭವಾಯಿತು. ಮಧ್ಯ ಪ್ರದೇಶದ ಸರ್ಕಾರ ಪ್ರೈವೇಟ್ ಕಂಪನಿಯೊಡನೆ 'ಪವರ್ ಪರ್‌ಚೇಸ್ ಅಗ್ರಿಮೆಂಟ್'ಗೆ ಸಹಿ ಮಾಡಿ ಅಣೆಕಟ್ಟಿನ ಕೆಲಸ ಪ್ರಾರಂಭಿಸಿತ್ತು. ಅಲ್ಲಿ ಹೋರಾಟ ಪ್ರಾರಂಭವಾದ ನಂತರ ಸುಪ್ರೀಂ ಕೋರ್ಟ್‌ನಲ್ಲಿ ಕೇಸ್ ಇದ್ದರಿಂದ ಅಣೆಕಟ್ಟಿನ ಕೆಲಸ ನಿಂತರೂ ಕೂಡಾ ಮರುವಸತಿ ಕೆಲಸ ಮುಂದುವರಿಯಿತು. ಮಧ್ಯಪ್ರದೇಶ್ ಹಾಗೂ ಮಹಾರಾಷ್ಟ್ರ ಸರ್ಕಾರಗಳು ಮರುವಸತಿ ಹಾಗೂ ಸ್ಥಳಾಂತರಗೊಂಡ ಜನರ ಜೊತೆ ತಮ್ಮ ವ್ಯವಹಾರ ಮುಂದುವರಿಸಿಯೇ ಇದ್ದಾರೆ. ಗುಜರಾತ್ ಸರ್ಕಾರ ಕಾಗದ-ಪತ್ರಗಳಲ್ಲಿ ಮರುವಸತಿ ಪಾಲಿಸಿಯನ್ನು ಹೊಂದಿದೆ. ತಮ್ಮ 'ಮರುವಸತಿ' - ಪ್ರಪಂಚದಲ್ಲಿಯೇ ಅತ್ಯುತ್ತಮ ಎಂದು ಗುಜರಾತ್ ಸರ್ಕಾರ ಜಂಬ ಕೊಚ್ಚಿಕೊಳ್ಳತೊಡಗಿದೆ.

ಆದರೆ ಅಣೆಕಟ್ಟಿಗಾಗಿ ಮುಳುಗಿಹೋಗುವ 19 ಹಳ್ಳಿಗಳ ಜನರಿಗೇ ಮರುವಸತಿ ಕಲ್ಪಿಸಲು ಗುಜರಾತ್ ಸರ್ಕಾರಕ್ಕೆ ಸಾಧ್ಯವಾಗಿಲ್ಲ. 19 ಹಳ್ಳಿಗಳ ಜನ 175 ಬೇರೆ ಬೇರೆ ಮರುವಸತಿಗೆ ಚದುರಲ್ಪಟ್ಟಿದ್ದಾರೆ. ಸಾಮಾಜಿಕ ಬಂಧನಗಳು ಮುರಿದು ಬಿದ್ದಿವೆ, ಸಮುದಾಯಗಳು ಒಡೆದು ಚೂರಾಗಿವೆ. 'ಮರುವಸತಿ'ಯ ಬಗ್ಗೆಗಿನ ವಚನಗಳು ಬೋಗಸ್ ಎಂಬುದು ಎಲ್ಲರಿಗೂ ಅರ್ಥವಾಗಿದೆ.

ವಿಶ್ವಬ್ಯಾಂಕ್ ಹಿಂದೆ ಸರಿದಿದೆ. ಈಗ ಸರ್ದಾರ್ ಸರೋವರ್ ಯೋಜನೆಗೆ ಹಣ ಎಲ್ಲಿಂದ ಬರುತ್ತದೆ ಎಂಬುದರ ಬಗ್ಗೆ ಸ್ಪಷ್ಟತೆ ಇಲ್ಲ. ಸುಪ್ರೀಂ ಕೋರ್ಟಿನ ಇಂಟೀರಿಯಮ್ ಆರ್ಡ್‌ರ್ ಮತ್ತೆ ಜನರನ್ನು, ಚಳುವಳಿಗಾರರನ್ನು ಬೀದಿಗೆ ತಂದಿದೆ. ದೆಹಲಿಯ ತನಕ ಹೋದ ನರ್ಮದಾ ಬಚಾವ್ ಆಂದೋಳನದ ಯಾತ್ರೆ ದೆಹಲಿಯ ನ್ಯಾಯಾಲಯದ ಕಿವಿ ಮುಚ್ಚೀತೇ ಎಂಬುದನ್ನು ಕಾದು ನೋಡಬೇಕಾಗಿದೆ.

*ಆಕರಗಳು*

*(1) ಸುಪ್ರೀಂ ಕೋರ್ಟ್‌ನ ಇಂಟೀರಿಯಮ್ ಆರ್ಡ್‌ರ್ ವಿರೋಧಿಸಲು ನರ್ಮದಾ ಬಚಾವ್ ಆಂದೋಲನ ನೀಡಿದ ಕರೆಯ ಕರಪತ್ರದಿಂದ ಹಾಗೂ*

*(2) 'The greater common good' June - 4th - 1999 front lineನಲ್ಲಿರುವ ಅರುಂಧತಿರಾಯ್‌ರವರ ಲೇಖನದ ಆಯ್ದ ಭಾಗದ ಅನುವಾದ.*

*ಅಣುಶಕ್ತಿ ಪ್ರಯೋಗ - ಅದು ಬಾಂಬ್ ಅಥವಾ ರಿಯಾಕ್ಟರ್ ಆಗಿರಲಿ - ಈ ವಿಶಾಲ ವಿಶ್ವದ ಪರಿಸರಕ್ಕೆ, ಸಮಸ್ತ ಜೀವಸಂಕುಲಕ್ಕೆ ಎಂದೆಂದಿಗೂ ತಡೆಯಲಾಗದ ಅಪಾಯವನ್ನು ತಂದೊಡ್ಡುತ್ತದೆ ಎಂಬುದು ಪ್ರಪಂಚಕ್ಕೇ ಮನದಟ್ಟಾಗಿರುವ ವಿಚಾರ. ಅಣು ಬಾಂಬ್ ಮತ್ತು ವಿದ್ಯುತ್ ಸ್ಥಾವರ ಎರಡಕ್ಕೂ ಪೂರ್ಣ ಸಂಬಂಧವಿದೆ ಎನ್ನುವದೂ ಕೂಡ ಅಷ್ಟೇ ಸ್ಪಷ್ಟ. ಒಂದನ್ನು ಒಪ್ಪಿ ಇನ್ನೊಂದನ್ನು ಕೈ ಬಿಡಲಾಗದು. "ಹಿರೋಷಿಮಾ ಬೇಡ; ಚೆರ್ನೊಬೈಲ್ ಬೇಕು" ಎನ್ನುವಷ್ಟು ಅಸಂಬದ್ಧ. ಇವೆರಡನ್ನೂ ಗೌಪ್ಯತೆ ಆವರಿಸಿರುವುದರಿಂದ, ಎರಡರ ಬಗ್ಗೆಯೂ ಸ್ಪಷ್ಟ ನೀತಿ ರೂಪುಗೊಂಡಿಲ್ಲ. "ಅಣುಬಾಂಬ್ ಮಾತ್ರ ಘಾತುಕ; ಅಣುಶಕ್ತಿ ಅವಶ್ಯಕ" ಎಂಬ ನಿಲುವು ವಿವೇಚನಾರಹಿತ. ಆದ್ದರಿಂದಲೇ ಪರಿಸರ ರಕ್ಷಣೆ, ಶಾಂತಿ ಮತ್ತು ಸರ್ಕಾರದ ನೀತಿಯಲ್ಲಿ ಪಾರದರ್ಶಕತೆ ಬಯಸುವ ಜನತೆ ವಿಶ್ವಾದ್ಯಂತ ಅಣುಶಕ್ತಿಯ ವಿರುದ್ಧ ದನಿ ಎತ್ತಿದ್ದಾರೆ. ಒಂದನೇ ಜಗತ್ತಿನ ರಾಷ್ಟ್ರಗಳಲ್ಲಿ ಹೊಸ ಅಣುಸ್ಥಾವರ ಸ್ಥಾಪನೆಯನ್ನು ಅಕ್ಷರಶಃ ನಿಷೇಧಿಸಲಾಗಿದೆ. ಆದ್ದರಿಂದಲೇ ಯುದ್ಧ ಪಿಪಾಸು ಮತ್ತು ಲಾಭಕೋರ ಪಶ್ಚಿಮದ ರಾಷ್ಟ್ರಗಳು ಈಗ ಅಣು ಜಾಲಕ್ಕೆ ಮೂರನೇ ಜಗತ್ತಿನ ರಾಷ್ಟ್ರಗಳನ್ನು ಸಿಲುಕಿಸುತ್ತಿವೆ.*

*ಜನಾಂದೋಲನಗಳ ರಾಷ್ಟ್ರೀಯ ಸಮನ್ವಯ - ಕರ್ನಾಟಕ, ಬೆಂಗಳೂರು ಘಟಕವು 11.5.1999ರಂದು ಬೆಂಗಳೂರಿನಲ್ಲಿ ವಿಚಾರ ಸಂಕಿರಣ ಏರ್ಪಡಿಸಿದ ಸಂದರ್ಭದಲ್ಲಿ ಹೊರತಂದ ಕರಪತ್ರ.*

# ಮರೆತ ದಶಕ : ಅರ್ಚನಾ ಗುಹಾ ಪ್ರಕರಣ

*'ಫ್ರಾಂಟಿಯರ್' ಪತ್ರಿಕೆಯಲ್ಲಿ 1996ರ ಸೆಪ್ಟೆಂಬರ್ 21, ಸೆಪ್ಟೆಂಬರ್ 28 ಹಾಗೂ ಅಕ್ಟೋಬರ್ 5ರಂದು ಪ್ರಕಟವಾದ ಲೇಖನಗಳ ಸಂಕ್ಷಿಪ್ತ ಅನುವಾದವಿದು. ಈ ಲೇಖನಗಳನ್ನು ಬರೆದ ಸುಭಾಷ್ ಗಂಗೂಲಿ ಅವರಿಗೆ 1996ರ 16ನೇ ಪಿಯುಸಿಎಲ್ "ಮಾನವ ಹಕ್ಕುಗಳಿಗಾಗಿ ಪತ್ರಿಕೋದ್ಯಮ" ಪ್ರಶಸ್ತಿಯನ್ನು 1997ರ ಮಾರ್ಚ್ 23ರಂದು ಅಹಮದಾಬಾದ್‌ನಲ್ಲಿ ಪ್ರದಾನ ಮಾಡಲಾಗಿದೆ. ಸುಭಾಷ್ ಗಂಗೂಲಿ ಅವರು ಫ್ರೀಲಾನ್ಸ್ ಪತ್ರಕರ್ತರಾಗಿದ್ದು ಪಶ್ಚಿಮ ಬಂಗಾಳ ಹಾಗೂ ಮಧ್ಯ ಪ್ರದೇಶದ ಹಲವಾರು ಮಾನವಹಕ್ಕು ಹೋರಾಟಗಳನ್ನು ಕುರಿತು ಹಲವು ಪತ್ರಿಕೆಗಳಿಗೆ ಬರೆಯುವ ಮೂಲಕ ಮಾನವ ಹಕ್ಕುಗಳ ಹೋರಾಟದಲ್ಲಿ ಸಕ್ರಿಯರಾಗಿದ್ದಾರೆ, ಅರ್ಚನಾ ಗುಹಾ ಪ್ರಕರಣವನ್ನು 19 ವರ್ಷಗಳಷ್ಟು ಸುದೀರ್ಘ ಕಾಲ ಅನುಸರಿಸಿ ವರದಿ ಮಾಡಿದ ಫಲಕ್ಕಾಗಿ ಈ ಪ್ರಶಸ್ತಿ ನೀಡಲಾಗಿದೆ ಎಂದು ಪಿಯುಸಿಎಲ್ ಅಧ್ಯಕ್ಷ ಕೆ. ಜಿ. ಕಣ್ಣಬೀರನ್ ಪ್ರಶಸ್ತಿ ಪತ್ರದಲ್ಲಿ ತಿಳಿಸಿದ್ದಾರೆ.*

ಅಂದು ನ್ಯಾಯಾಲಯ ಕಿಕ್ಕಿರಿದು ತುಂಬಿತ್ತು. 1996 ಜೂನ್ 5 - ಮಧ್ಯಾಹ್ನ 12-30 ಗಂಟೆ. ಕಲ್ಕತ್ತದ ಬಂಕ್‌ಷಾಲ್ ಕೋರ್ಟ್ ಎಂದು ಪ್ರಸಿದ್ಧವಾದ 7ನೇ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯದ ವಿಚಾರಣಾ ಮ್ಯಾಜಿಸ್ಟ್ರೇಟ್ ಸುರ್ಜೇಂದು ಬಿಸ್ವಾಸ್ 'ಅರ್ಚನಾ ಗುಹಾ ಪ್ರಕರಣ'ದ ತೀರ್ಪು ಓದತೊಡಗಿದರು. ಕಲ್ಕತ್ತದ ಪೊಲೀಸ್ ಅಧಿಕಾರಿ ರಂಜಿತ್ ಅಲಿಯಾಸ್ ರುನು ಗುಹಾ ನಿಯೋಗಿ ಹಾಗೂ ಕಾನ್‌ಸ್ಟೇಬಲ್ ಸಂತೋಷ್ ದೇವ್ ವಿರುದ್ಧ ಅರ್ಚನಾ ಗುಹಾ ಹೂಡಿದ್ದ ಮೊಕದ್ದಮೆ ಅದು. ಈ ಪ್ರಕರಣದಲ್ಲಿ ಇನ್ನೂ ಮೂವರು ಆರೋಪಿಗಳಿದ್ದರು. 19 ವರ್ಷಗಳ ದೀರ್ಘ ನ್ಯಾಯಾಂಗ ಪ್ರಕ್ರಿಯೆಯಲ್ಲಿ ಅರುಣ್ ಬ್ಯಾನರ್ಜಿ ಹಾಗೂ ಆದಿತ್ಯ ಕರ್ಮಾಕರ್ ತೀರಿಕೊಂಡಿದ್ದರು. ಮೂರನೇ ಆರೋಪಿ (ಕಮಲ್‌ದಾಸ್)ಯ ಅಸ್ತಿತ್ವವನ್ನೂ ಪೊಲೀಸರು ಆರಂಭದಿಂದಲೇ ನಿರಾಕರಿಸಿಕೊಂಡು ಬಂದಿದ್ದರು. ಲಾಲ್‌ಬಜಾರ್ ಲಾಕಪ್‌ನಲ್ಲಿ ಅರ್ಚನಾಗುಹಾ, ಅರ್ಚನಾರ ನಾದಿನಿ, ಲತಿಕಾ ಗುಹಾ ಹಾಗೂ ಗೌರಿ ಚಟರ್ಜಿಯ ಮೇಲೆ ಹಿಂಸಾಚಾರ ಎಸಗಿದ ಆರೋಪಕ್ಕೆ ಈ ಪೊಲೀಸರು ಗುರಿಯಾಗಿದ್ದರು. ಇದು ನಡೆದದ್ದು 1974ರಲ್ಲಿ ಆಗ ಕೇಂದ್ರ (ಇಂದಿರಾಗಾಂಧಿ) ಹಾಗೂ ರಾಜ್ಯದಲ್ಲಿ (ಸಿದ್ಧಾರ್ಥ ಶಂಕರ್ ರಾಯ್) ಕಾಂಗ್ರೆಸ್ ಆಳ್ವಿಕೆಯಿತ್ತು. ಪೊಲೀಸರ ಚಿತ್ರಹಿಂಸೆಯಿಂದ ಅರ್ಚನಾರ ಕೆಳಭಾಗದ ಕೈಕಾಲುಗಳು ಪೂರ್ಣ ಶಕ್ತಿಹೀನವಾಗಿತ್ತು. ಇದಕ್ಕಾಗಿ ಆಕೆ ಡೆನ್ಮಾರ್ಕ್‌ನಲ್ಲಿ ಅಂತರರಾಷ್ಟ್ರೀಯ ಕ್ಷಮಾದಾನ ಸಂಸ್ಥೆಯ ಡೇನಿಷ್ ಮೆಡಿಕಲ್ ಗ್ರೂಪ್‌ನ ಆಶ್ರಯದಲ್ಲಿ ಕೋಪೆನ್‌ಹೇಗನ್‌ನ ಯೂನಿವರ್ಸಿಟಿ ಆಸ್ಪತ್ರೆಯಲ್ಲಿ ವರ್ಷಾನುಗಟ್ಟಲೆ ದೀರ್ಘ ಚಿಕಿತ್ಸೆಗೆ ಒಳಪಟ್ಟಿದ್ದರು. ಅಲ್ಲದೆ ಚಿತ್ರಹಿಂಸೆಗೊಳಗಾದ ವ್ಯಕ್ತಿಗಳ ಪುನರ್ವಸತಿ ಕೇಂದ್ರದಲ್ಲೂ ಚಿಕಿತ್ಸೆಗೆ ಒಳಪಟ್ಟಿದ್ದರು. ಇಲ್ಲಿ ಈಕೆ ಇಂತಹ ಚಿಕಿತ್ಸೆ ಪಡೆದ ಮೊದಲ ಭಾರತೀಯ ಕೈದಿಯಾಗಿದ್ದರು. ಇದಕ್ಕಾಗಿ ಈಕೆಯ ಪರ ವಾದಿಸಿದ ವಕೀಲರೂ ಆಗಿದ್ದ ತಮ್ಮ ಸೌಮೇನ್‌ನ ಶ್ರಮ ಸಾಕಷ್ಟಿತ್ತು.

ಈ ಪ್ರಕರಣಕ್ಕೆ ಸಂಬಂಧಿಸಿದ 59 ಪುಟಗಳ ತೀರ್ಪನ್ನು ಕಾಲಾವಕಾಶದ ಅಭಾವದಿಂದ ನ್ಯಾಯಾಲಯದಲ್ಲಿ ಪೂರ್ಣ ಓದಲಿಲ್ಲ. ಶಿಕ್ಷೆಗೆ ಗುರಿಯಾದ ರಾನು ಹಾಗೂ ಸಂತೋಷ್ ಮೇಲಿನ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸುವುದಾಗಿ ಒಂದು ತಿಂಗಳಿಗೆ ಜಾಮೀನು ಪಡೆದರು.

ಈ ಪ್ರಕರಣ ಶುರುವಾದದ್ದು 1977ರ ಆಗಸ್ಟ್ 20ರಂದು ಕಾಲು ಕುಂಟಾದ ಅರ್ಚನಾ ಸ್ಟ್ರೆಚರ್‌ನಲ್ಲಿ ಮಲಗಿಯೇ ಕಲ್ಕತ್ತದ ಚೀಫ್ ಮೆಟ್ರೊಪಾಲಿಟನ್ ಮ್ಯಾಜಿಸ್ಟ್ರೇಟ್ ಎದುರು ತಮ್ಮ ದೂರು ದಾಖಲಿಸಿದ್ದರು. ಅಂತರರಾಷ್ಟ್ರೀಯ ಕ್ಷಮಾದಾನ ಸಂಸ್ಥೆ ಈ ಪ್ರಕರಣದಲ್ಲಿ ತಳೆದ ಆಸಕ್ತಿಯಿಂದಾಗಿ ಅರ್ಚನಾ ಗುಹಾ ಅಂತರರಾಷ್ಟ್ರೀಯ ಗಮನ ಸೆಳೆದರು. ಇದು ಸ್ಥಳೀಯ ಪತ್ರಿಕೆಗಳು ಹಾಗೂ ಮಾಧ್ಯಮಗಳೂ ಈ ಪ್ರಕರಣದಲ್ಲಿ ಆಸಕ್ತಿ ತಳೆಯಲು ಇಂಬು ನೀಡಿತು - ಪ್ರಾಸಿಕ್ಯೂಷನ್ ವಕೀಲರಾಗಿ ಸೌಮೇನ್ ಗುಹಾ ನಿರ್ವಹಿಸಿದ ಹೊಣೆಗಾರಿಕೆ ನ್ಯಾಯಾಂಗ ವಿಜಯಕ್ಕೆ ಕಾರಣವಾಯಿತು.

1974ರ ಜುಲೈ 18 ಮಧ್ಯರಾತ್ರಿ 1.30 ಕಲ್ಕತ್ತದ ಈಶಾನ್ಯ ಭಾಗದ ಬಡ ಹಾಗೂ ಕೆಳ ಮಧ್ಯಮ ವರ್ಗದ ಜನ ವಾಸಿಸುವ ಡಮ್‌ಡಮ್‌ನ ಜಾದ್‌ಪುರ ರಸ್ತೆಯಲ್ಲಿರುವ 7ನೇ ನಂಬರಿನ ಮನೆಯ ಬಾಗಿಲು ತಟ್ಟಲಾಯಿತು. ಬಾಗಿಲು ತೆರೆದಾಗ

ಕೋಣೆಯನ್ನೆಲ್ಲಾ ಕಿತ್ತು ಧ್ವಂಸ ಮಾಡಿದ ಪೊಲೀಸರು ಖಾಲಿ ಹಾಳೆಯಲ್ಲಿ ಮನೆ ಮಾಲೀಕರ ಸಹಿ ಪಡೆದುಕೊಂಡು ಮೇಲೆ ಹೆಸರಿಸಿದ ಮೂವರು ಮಹಿಳೆಯರನ್ನು ಬಂಧಿಸಿದರು. ಇವರಲ್ಲಿ ಅರ್ಚನಾ ಜೂನಿಯರ್ ಶಾಲೆಯ ಹೆಡ್‌ಮಿಸ್ಟ್ರೆಸ್ ಆಗಿದ್ದರು.

ಲತಿಕಾ ಕಾಲೇಜ್ ಲೆಕ್ಚರರ್ ಹಾಗೂ ಗೌರಿ ಅಂಗಡಿಯೊಂದರಲ್ಲಿ ಕೆಲಸದಲ್ಲಿದ್ದರು. ಕೋರ್ಟ್‌ಗೆ ಒಯ್ಯುವ ಮುಂಚೆ ಇವರನ್ನು 24 ಗಂಟೆಗೂ ಹೆಚ್ಚು ಕಾಲ ಅಕ್ರಮವಾಗಿ ಬಂಧಿಸಲಾಗಿತ್ತು. ಆ ನಂತರವೂ ಅವರ ಬಂಧನದ ಅವಧಿಯಲ್ಲಿ ಕೋರ್ಟ್ ದಿನಗಳಂದು ಅವರನ್ನೆಂದೂ ಕೋರ್ಟ್‌ನಲ್ಲಿ ಹಾಜರು ಪಡಿಸಲಿಲ್ಲ. ಹೀಗಾಗಿ ಈ ಕೈದಿಗಳ ವಾಸ್ತವ ಸ್ಥಿತಿಯನ್ನೆಂದೂ ಮ್ಯಾಜಿಸ್ಟ್ರೇಟ್ ನೋಡಲು ಅವಕಾಶ ಸಿಗಲಿಲ್ಲ. ಆ ನಂತರ ಅವರು 27 ದಿನಗಳ ಕಾಲ ತೀರಾ ಕ್ರೂರವಾದ ಅಮಾನವೀಯ, ಅವಮಾನಕರವಾದ ಚಿತ್ರ ಹಿಂಸೆಗಳಿಗೆ ಒಳಗಾದರು. ನಕ್ಸಲೀಯ ಸಂಪರ್ಕ ಹೊಂದಿದ್ದಾರೆಂಬ ಆರೋಪ ಹಾಗೂ ಅರ್ಚನಾ ತಮ್ಮ ಹಾಗೂ ಲತಿಕಾರ ಪತಿ ಸೌಮೇನ್ ಗುಹಾ ಎಲ್ಲಿದ್ದಾರೆಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ಕೈದಿಗಳ ಚೈತನ್ಯವನ್ನೇ ಉಡುಗಿಸುವಂತಹ ರೀತಿಯ ಚಿತ್ರಹಿಂಸೆಗಳನ್ನು ನೀಡಲಾಯಿತು. ಯದ್ವಾತದ್ವಾ ಹೊಡೆತ, ಒದೆಯುವುದು, ಉರಿಯುವ ಸಿಗರೇಟ್/ಸಿಗಾರ್ ಅನ್ನು ದೇಹದ ವಿವಿಧ ಭಾಗಗಳ ಮೇಲೆ ಒತ್ತುವುದು, ವಿಶೇಷ ಹಗ್ಗದಲ್ಲಿ ತಲೆಗೆ ಛಡಿ ಏಟು ನೀಡುವುದು, ಕೂದಲು ಎಳೆಯುವುದು, ಗೋಡೆಗೆ ತಲೆ ಹೊಡೆಸುವುದು, ಬೂಟುಗಾಲಿನಿಂದ ಕೈದಿಯ ಬರಿಗಾಲು ತುಳಿಯುವುದು ಇತ್ಯಾದಿ ವಿವಿಧ ಬಗೆಯ ಶಿಕ್ಷೆಗಳನ್ನು ಈ ಮಹಿಳೆಯರ ಮೇಲೆ ಪ್ರಯೋಗ ಮಾಡಲಾಗಿತ್ತು. ದೇಹ-ಮನಸ್ಸಿನ ಮೇಲೆ ನಡೆಸುವ ಅಮಾನುಷ ಹಲ್ಲೆಗಳ ಜೊತೆಗೆ ಕೆಟ್ಟ ಭಾಷೆಯನ್ನೂ ಬಳಸಲಾಗುತ್ತಿತ್ತು. ಹೊರಗೆ ನಿಂತಿರುವ ಹಿಂದೂಸ್ತಾನಿ ಸಿಪಾಯಿಗಳಿಂದ ಅತ್ಯಾಚಾರ ಮಾಡಿಸುವ ಬೆದರಿಕೆಯನ್ನು ಈ ಕೈದಿಗಳಿಗೆ ನೀಡಲಾಗಿತ್ತು. ಮತ್ತೊಮ್ಮೆ ಎಲ್ಲರನ್ನೂ ಚೂರುಚೂರುಗಳಾಗಿ ಕತ್ತರಿಸಿ ಗಂಗಾ ನದಿಗೆ ಎಸೆಯಲಾಗುವುದೆಂದೂ ಬೆದರಿಸಲಾಗಿತ್ತು. ಚಿತ್ರಹಿಂಸೆಯ ನೋವು, ಭೀತಿ, ಅವಮಾನಗಳಲ್ಲಿ 27 ದಿನಗಳನ್ನು ಈ ಮಹಿಳೆಯರು ಲಾಕಪ್‌ನಲ್ಲೇ ಕಳೆದರು. ಈ ಮೂವರು ಮಹಿಳೆಯರೂ ಪರಸ್ಪರ ಭಾವನಾತ್ಮಕ ಬೆಂಬಲ ಕೊಟ್ಟುಕೊಳ್ಳುವ ಮೂಲಕ ತಮ್ಮ ಚೈತನ್ಯ ಕುಸಿಯದಂತೆ ಕಾಪಾಡಿಕೊಂಡರು.

ಈ ಮಹಿಳೆಯರ ವಿರುದ್ಧ ಹಲವಾರು ಸುಳ್ಳು ಪ್ರಕರಣಗಳನ್ನು ದಾಖಲಿಸಲಾಯಿತು. ಖಾಲಿ ಹಾಳೆಗೆ ಮಹಿಳೆಯರ ಸಹಿಯನ್ನು ಬಲಾತ್ಕಾರದಿಂದ ಪಡೆದುಕೊಂಡು, ನಂತರ ಅವರ ಬಂಧನದ ಅವಧಿಯಲ್ಲಿ ಅವರ ನಿವಾಸದಿಂದ ಹಲವು ವಸ್ತುಗಳನ್ನು ವಶಪಡಿಸಿಕೊಳ್ಳಲಾಯಿತು ಎಂಬ ಬಗೆಯಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಲಾಯಿತು. 'ಮೀಸಾ' ಅಡಿ ಅವರ ಬಂಧನಕ್ಕೆ ಈ ದಾಖಲೆಗಳನ್ನು ಬಳಸಲಾಯಿತು. ಈ ಚಿತ್ರಹಿಂಸೆಗಳಿಂದ ಅರ್ಚನಾ ಸ್ಥಿತಿ ಎಷ್ಟು ಹದಗೆಟ್ಟಿತೆಂದರೆ ಆಕೆಯ ಇಡೀ ದೇಹಕ್ಕೆ ಲಕ್ವ ಬಡಿದಂತೆ ಆಯಿತು. ಓಡಾಡುವ ಸಾಮರ್ಥ್ಯವನ್ನೇ ಆಕೆ ಕಳೆದುಕೊಂಡರು.

ಭಾರತೀಯ ದಂಡ ಸಂಹಿತೆಯ 166 (ಬೇರೆಯವರಿಗೆ ಗಾಯ ಮಾಡುವುದಕ್ಕಾಗಿ ಕಾನೂನಿಗೆ ಅವಿಧೇಯತೆ ತೋರುವ ಸಾರ್ವಜನಿಕ ಸೇವಕ), 348 (ಬಲವಂತದಿಂದ ಹೇಳಿಕೆ ಪಡೆದುಕೊಳ್ಳಲು ಅಕ್ರಮ ಬಂಧನ), 324 (ಅಪಾಯಕಾರಿ ಆಯುಧ ಅಥವಾ ರೀತಿಯಿಂದ ಸ್ವಯಂ ಇಚ್ಛೆಯಿಂದ ನೋವುಂಟು ಮಾಡುವುದು), 330 (ಬಲಾತ್ಕಾರದಿಂದ ಹೇಳಿಕೆ ಪಡೆಯಲು ತಾನೇ ನೋವುಂಟು ಮಾಡುವುದು), 509 (ಮಹಿಳೆಗೆ ಅವಮಾನ ಮಾಡುವಂತೆ ಬಳಸುವ ಪದ, ಸನ್ನೆ ಅಥವಾ ಕ್ರಿಯೆ) ವಿಧಿಗಳ ಅನ್ವಯ ಈ ಪ್ರಕರಣದಲ್ಲಿ ಆರೋಪಿಗಳಾದವರ ವಿಚಾರಣೆ ನಡೆಸಲಾಯಿತು. ಇದರಲ್ಲಿ 330ನೇ ವಿಧಿಯ ಪ್ರಕಾರ ಆರೋಪ ಸಾಬೀತಾದಲ್ಲಿ 7 ವರ್ಷಗಳ ಕಾಲದ ಗರಿಷ್ಠ ಶಿಕ್ಷೆ ವಿಧಿಸಲಾಗುತ್ತದೆ.

ತೀರ್ಪಿನಲ್ಲಿ ಈ ಎಲ್ಲಾ ವಿಧಿಗಳ ಅನ್ವಯದ ಅಪರಾಧಗಳನ್ನು ಎಸಗಲಾಗಿದೆ ಎಂಬುದು ಸಾಬೀತಾಗಿತ್ತು. ಇದು ಪಶ್ಚಿಮ ಬಂಗಾಳದ ವಿಚಾರಣಾ ಕೋರ್ಟ್‌ನ ಇತಿಹಾಸದಲ್ಲೇ ಲಾಕಪ್ ಹಿಂಸಾಚಾರಕ್ಕೆ ಸಂಬಂಧಿಸಿದಂತೆ ನೀಡಿದ ಮಹತ್ವದ ತೀರ್ಪು. ಅತ್ಯಂತ ಹೇಡಿತನದ ಈ ಬಗೆಯ ಹಿಂಸಾಚಾರದ ವಿರುದ್ಧ ಭವಿಷ್ಯದ ನ್ಯಾಯಾಂಗ ಪರಿಹಾರಕ್ಕೆ ಈ ತೀರ್ಪು ದಿಕ್ಸೂಚಿಯಾಗಿದೆ.

70ರ ದಶಕದ ದಿನಗಳಲ್ಲಿ ಚಿತ್ರಹಿಂಸೆಯ ವೈವಿಧ್ಯಗಳು, ಅರ್ಚನಾ ಅನುಭವಿಸಿದ್ದಕ್ಕಿಂತ ದಾರುಣವಾದ ಪ್ರಕರಣಗಳೂ ಪ್ರಚಲಿತವಿದ್ದವು. ಅನೇಕ ಮಂದಿ ಹುಚ್ಚರಾಗಿ ಚೇತರಿಕೆಯ ಹಂತವನ್ನೇ ಮೀರಿ ಹೋದವರಿದ್ದರು. ಇಡೀ ಪಶ್ಚಿಮ ಬಂಗಾಳ ಮತ್ತು ಇತರ ಕೆಲವು ರಾಜ್ಯಗಳಲ್ಲಿ ಸರ್ಕಾರಿ ಭಯೋತ್ಪಾದನೆ ಮೇರೆ ಮೀರಿತ್ತು. ಘರ್ಷಣೆಗಳಲ್ಲಿ ಅಥವಾ ಜೈಲು ಹತ್ಯೆಗಳು ದಿನ ನಿತ್ಯದ ಸಂಗತಿಗಳಾಗಿದ್ದವು.

ಅರ್ಚನಾ ಗುಹಾ ಪ್ರಕರಣದ ವಿಶಿಷ್ಟ ಅಂಶವೆಂದರೆ

ಕಾನೂನಿನಲ್ಲಿ ಯಾವುದೇ ವೃತ್ತಿಪರ ತರಬೇತಿ ಇಲ್ಲದ ಸಾಮಾನ್ಯ ನಾಗರೀಕನಿಗೆ ವಾದ ಮಾಡಲು ನ್ಯಾಯಾಲಯ ಅವಕಾಶ ಕಲ್ಪಿಸಿತ್ತು. ನಾಗರಿಕನಿಗೆ ವಾದ ಮಾಡಲು ನ್ಯಾಯಾಲಯ ಅವಕಾಶ ಕಲ್ಪಿಸಿತ್ತು. ಕಾನೂನು ತರಬೇತಿ ಇಲ್ಲದ ಅರ್ಚನಾರ ತಮ್ಮ ಸೌಮೇನ್ ಗುಹಾ ತಾವು ವಾದ ಮಾಡುವುದಕ್ಕೆ ಅಗತ್ಯ ಅನುಮತಿ ಪಡೆದುಕೊಳ್ಳುವುದಕ್ಕಾಗಿ 7ನೇ ಮೆಟ್ರೊಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯದ ಮ್ಯಾಜಿಸ್ಟ್ರೇಟ್ ನಂದ ದುಲಾಲ್ ಗ್ವಿನ್ ಎದುರು ಒಂದೂವರೆ ಗಂಟೆ ಕಾಲ ವಾದ ಮಾಡಿದ್ದರು. ಕಡೆಗೆ ಸೌಮೇನ್ ಗುಹಾರಿಗೆ ವಾದ ಮಾಡಲು ನ್ಯಾಯಾಲಯ ಅನುಮತಿ ನೀಡಿತಾದರೂ ಅವರು ವಾದ ಮಾಡಲಿಕ್ಕೆ ಅರ್ಹರಲ್ಲ ಎನಿಸಿದ ತಕ್ಷಣ ಅನುಮತಿ ವಾಪಸ್ ತೆಗೆದುಕೊಳ್ಳುವ ಷರತ್ತನ್ನೂ ಹಾಕಿತ್ತು. ಹೀಗಾಗಿ ಸೌಮೇನ್ ಗುಹಾ ಸತತ ಒತ್ತಡದಲ್ಲಿಯೇ ಕಾರ್ಯ ನಿರ್ವಹಿಸುವುದು ಅನಿವಾರ್ಯವಾಗಿತ್ತು. ಸೌಮೇನ್ ಗುಹಾರ 6 ದಿನಗಳ ಸುದೀರ್ಘ 'ವಾದ' ವಿಜಯಕ್ಕೆ ನಾಂದಿಯಾಯಿತು. ಇದು ನಾಗರಿಕ ಹಕ್ಕುಗಳ ಕಾರ್ಯಕರ್ತರಿಗೆ ಹೊಸದೊಂದು ಹಾದಿಯನ್ನು ತೆರೆಯಿತು. ಸೌಮೇನ್ ಗುಹಾ ಅವರೂ ಇದೇ ಪೊಲೀಸ್ ಅಧಿಕಾರಿ ರುನು ಗುಹಾ ನಿಯೋಗಿಯಿಂದ ಚಿತ್ರಹಿಂಸೆ ಅನುಭವಿಸಿದ್ದವರೇ ಆಗಿದ್ದರು. ಈ ಮೂವರು ಮಹಿಳೆಯರ ಬಂಧನದ ನಂತರ ಸ್ವಲ್ಪ ಕಾಲದಲ್ಲೇ ಸೌಮೇನ್ ಗುಹಾ ಅವರನ್ನು ಬಂಧಿಸ ಲಾಗಿತ್ತು. ಯಾವುದೇ ಕಾನೂನು ತರಬೇತಿ ಇಲ್ಲದ ಸೌಮೇನ್ ಗುಹಾ ತನ್ನ ಸೋದರಿ ಪರ ವಕಾಲತ್ತು ವಹಿಸಿ ಆರೋಪಿಗಳ ಪರ ವೃತ್ತಿಪರ ವಕೀಲರನ್ನು ತನ್ನ ಶಾಂತ, ನಾಗರಿಕ ಭಾಷೆಯ ವಾದದಿಂದ ಸೋಲಿಸಿದ್ದು ನ್ಯಾಯಾಂಗ ಪ್ರಕ್ರಿಯೆಯಲ್ಲಿ ಹೊಸ ಇತಿಹಾಸ ನಿರ್ಮಾಣಕ್ಕೆ ಕಾರಣವಾಯಿತು.

1977ರ ಆಗಸ್ಟ್ 20ರಂದು ಅರ್ಚನಾ ಗುಹಾ ದೂರು ದಾಖಲಿಸಿದ ನಂತರ ತೀರ್ಪು ನೀಡಿಕೆಗೆ 19 ವರ್ಷಗಳು ಕಾಯಬೇಕಾಯಿತು. ಯಾತಕ್ಕಾಗಿ ಇಷ್ಟು ಕಾಲ ಕಾಯಬೇಕು? ಏಕೆಂದರೆ ರುನು ಗುಹಾ ನಿಯೋಗಿ ಮತ್ತವರ ಸಹಚರರು ವಿಚಾರಣೆ ಎದುರಿಸಲೇ ಸಿದ್ಧರಿರಲಿಲ್ಲ. 70ರ ದಶಕದಲ್ಲಿ ಪಶ್ಚಿಮ ಬಂಗಾಳದ ವಿವಿಧ ಪೊಲೀಸ್ ಠಾಣೆಗಳಲ್ಲಿ ಇಂತಹದೇ ಕೃತ್ಯಗಳನ್ನು ನಡೆಸಿದ ತನ್ನ ಸಮಕಾಲೀನ ಪೊಲೀಸ್ ಅಧಿಕಾರಿಗಳು ಸಿಕ್ಕಿ ಹಾಕಿಕೊಳ್ಳದಿರುವಾಗ ತಾನ್ಯಾಕೆ ವಿಚಾರಣೆ ಎದುರಿಸಬೇಕು ಎಂಬುದು ಆತನ ಆಲೋಚನೆ ಆಗಿರಬೇಕು. ಆದರೆ ಈ ಪ್ರಕರಣ ಕೋರ್ಟಿಗೆ ಎಳೆದದ್ದು ಗುಹಾ ಕುಟುಂಬದ ಧೈರ್ಯ. ನ್ಯಾಯಾದ ಬಾಗಿಲನ್ನು ತಟ್ಟಿ 19 ವರ್ಷಗಳಷ್ಟು ಕಾಲ ಎಲ್ಲಾ ಅಡೆತಡೆಗಳನ್ನು ಮೀರಿ ಹೋರಾಡುವ ಛಲವನ್ನು ಅವರು ಪ್ರದರ್ಶಿಸಿದರು.

ಆರಂಭದಿಂದಲೇ ವಿಚಾರಣಾ ನ್ಯಾಯಾಲಯದ ಕಲಾಪ ಸ್ಥಗಿತಗೊಳಿಸುವುದಕ್ಕಾಗಿ ಒಂದಲ್ಲ ಒಂದು ನೆಪ ಒಡ್ಡಿ ಒಂದು ನ್ಯಾಯಾಲಯದಿಂದ ಮತ್ತೊಂದು ನ್ಯಾಯಾಲಯಕ್ಕೆ ರುನು ಮತ್ತಿತರ ಆರೋಪಿಗಳು ಮನವಿಗಳನ್ನು ಸಲ್ಲಿಸುತ್ತಲೇ ಹೋದರು. ಹೀಗಾಗಿ ವಿಚಾರಣಾ ನ್ಯಾಯಾಲಯದಲ್ಲಿ ಕಲಾಪ ಆರಂಭವಾಗುವ ವೇಳೆಗೆ, ಈ ಪ್ರಕರಣ ಸೆಷನ್ಸ್ ಕೋರ್ಟ್‌ನಲ್ಲಿ 2 ಬಾರಿ, ಕಲ್ಕತ್ತ ಹೈಕೋರ್ಟ್‌ನಲ್ಲಿ 8 ಬಾರಿ, ಸುಪ್ರೀಕೋರ್ಟ್‌ನಲ್ಲಿ 5 ಬಾರಿ ಈ ಪ್ರಕರಣ ಹಾದು ಬಂದಿತ್ತು.

ಅರ್ಚನಾರಿಂದ ಸಾಕ್ಷಿ ಹೇಳಿಕೆ ಪಡೆದುಕೊಳ್ಳುವುದಕ್ಕೇ ದಶಕಗಳ ಕಾಲ ಹಿಡಿಯಿತು. 9 ವರ್ಷ 1 ತಿಂಗಳು ವಿಳಂಬವಾಗಲು ರುನು ಮತ್ತಿತರ ಆರೋಪಿಗಳು ಕಾರಣವಾದರೆ ಅರ್ಚನಾರಿಂದ ಕೇವಲ 1 ವರ್ಷ 1 ತಿಂಗಳು ವಿಳಂಬ ಉಂಟಾಯಿತು. ಏಕೆಂದರೆ 1981ರ ನಂತರ ಅವರು ಚಿಕಿತ್ಸೆಗಾಗಿ ಹಾಗೂ ಡೇನಿಷ್ ನಾಗರೀಕನ ಜೊತೆ ವಿವಾಹದ ಕಾರಣ ಡೆನ್ಮಾರ್ಕ್‌ನಲ್ಲೇ ಉಳಿಯಬೇಕಾಗಿತ್ತು.

ಈ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯನ್ನು ಖಾಸಗಿಯಾಗಿ ಕೆಳಮಧ್ಯಮ ವರ್ಗದ ಕುಟುಂಬವೊಂದು ಹೋರಾಡಿ ಜಯ ಗಳಿಸಿದೆ ಎಂಬ ಅಂಶವನ್ನು ಪರಿಗಣನೆಗೆ ತೆಗೆದುಕೊಂಡರೆ ಈ ಐತಿಹಾಸಿಕ ಹೋರಾಟದ ಪೂರ್ಣ ಸಾಮಾಜಿಕ ಹಾಗೂ ಮಾನವೀಯ ಪ್ರಾಮುಖ್ಯ ಗೋಚರಿಸುತ್ತದೆ. ಸೌಮೇನ್ ಗುಹಾ ಚಿತ್ರಹಿಂಸೆಗೆ ಒಳಗಾದವರನ್ನು ಒಟ್ಟು ಸೇರಿಸಿ "ಸಮವಸ್ತ್ರದ ಅಪರಾಧಿಗಳ" ವಿರುದ್ಧ ಹೋರಾಡಲು ಇಚ್ಛಿಸಿದ್ದರು. ಆದರೆ ಚಿತ್ರಹಿಂಸೆ ಗೊಳಗಾದವರು ಮತ್ತು ಅವರ ಬಂಧುಗಳಿಂದ ಹೆಚ್ಚಿನ ಪ್ರತಿಕ್ರಿಯೆ ಸಿಗದಿದ್ದುದರಿಂದ ತಾವೇ ಸ್ವತಃ ಈ ಹೋರಾಟದ ಹಾದಿ ಹಿಡಿಯಲು ನಿರ್ಧರಿಸಿದರು. ನಾಲ್ವರ ಕುಟುಂಬವದು. ಇದರಲ್ಲಿ ಅರ್ಚನಾ ಹಾಗೂ ಆಕೆಯ ತಮ್ಮ ಸೌಮೇನ್ ಹಾಗೂ ನಾದಿನಿ ಲತಿಕಾ ಪೊಲೀಸ್ ಚಿತ್ರಹಿಂಸೆಗೆ ಒಳಪಟ್ಟವರೇ. ಅರ್ಚನಾ ಹಾಗೂ ಅವರ ತಾಯಿ ಪಾರ್ಶ್ವವಾಯುವಿನಿಂದ ನಡೆಯಲಾಗದ ಸ್ಥಿತಿ ಇದ್ದವರು. ತಾಯಿಗೆ ಲಕ್ವ ಹೊಡೆದು ನಡೆಯಲಾಗದ ಸ್ಥಿತಿ ಏರ್ಪಟ್ಟಿದ್ದರೆ ಅರ್ಚನಾಗೆ ಪೊಲೀಸ್ ಚಿತ್ರಹಿಂಸೆಯಿಂದ ಉಂಟಾಗಿದ್ದ ಅಸಹಾಯಕ ಸ್ಥಿತಿ ಅದು. ಕಾಲೇಜು ಉಪನ್ಯಾಸಕಿ ಲತಿಕಾ ಮಾತ್ರ ಇಡೀ ಕುಟುಂಬದಲ್ಲಿ

ದುಡಿಯುವ ಸದಸ್ಯೆಯಾಗಿದ್ದರು. ಅಸಹಾಯಕ ಸ್ಥಿತಿಯಲ್ಲಿದ್ದ ಬಂಧುಗಳ ಪೋಷಣೆಯ ಹೊಣೆ ಹೊತ್ತ ಸೌಮೇನ್-ಲತಿಕಾ ದಂಪತಿಗಳು ಆ ಬಡಾವಣೆಯಲ್ಲಿ ದಂತಕಥೆಯಾಗಿದ್ದರು ಎಂದೂ ಅರ್ಚನಾ ಕೃತಜ್ಞತೆಯಿಂದ ಸ್ಮರಿಸುತ್ತಾರೆ. 1983ರಲ್ಲಿ ತಾಯಿಯ ಸಾವು ಈ ಕುಟುಂಬಕ್ಕೆ ಭಾರೀ ಹೊಡೆತವಾಯಿತು. ಮಗ, ಮಗಳು, ಸೊಸೆ ಜೈಲಿನಲ್ಲಿದ್ದಾಗ ಜೈಲು-ಆಸ್ಪತ್ರೆ ಓಡಾಟ ನಡೆಸಿದ್ದ ಈ ವೃದ್ಧೆ ಕುಟುಂಬದ ನೈತಿಕ ಶಕ್ತಿಯಾಗಿದ್ದರು. 81ರ ನಂತರ ಅರ್ಚನಾ ಸಹ ಡೆನ್ಮಾರ್ಕಿಗೆ ಹೋದ ನಂತರ ಕೋರ್ಟ್ ದಿನಗಳಿಗೆ ಬರುವುದು, ಸ್ವಲ್ಪ ಪ್ರಮಾಣದ ಹಣ ಏರ್ಪಾಡು ಮಾಡುವುದು ಬಿಟ್ಟರೆ ಬೇರೆ ಯಾವ ರೀತಿಯ ಸಹಾಯವನ್ನೂ ಮಾಡದವರಾಗಿದ್ದರು. ಹೀಗಾಗಿ ಸೌಮೇನ್-ಲತಿಕಾ, ಈ ಎಲ್ಲಾ ದೈಹಿಕ, ಮಾನಸಿಕ, ಆರ್ಥಿಕ ಬಿಕ್ಕಟ್ಟುಗಳಲ್ಲೂ ತಮ್ಮ ಹೋರಾಟವನ್ನೂ ಮುಂದುವರಿಸಿದರು. ಈ ಮೊಕದ್ದಮೆ ಅವರ ಜೀವಮಾನದ ಗೀಳಾಯಿತು.

1975-77ರ ಆಂತರಿಕ ತುರ್ತು ಪರಿಸ್ಥಿತಿಯ ನಂತರ ಎಡ ರಂಗ ಸರಕಾರ ಪಶ್ಚಿಮ ಬಂಗಾಳದಲ್ಲಿ ಅಧಿಕಾರಕ್ಕೆ ಬಂದಿತು. ಪೊಲೀಸ್ ಠಾಣೆಗಳ ಒಳಗಿನ ಚಿತ್ರಹಿಂಸೆಗಳಿಗೆ ಕಾರಣರಾದವರನ್ನು ಶಿಕ್ಷಿಸುವ ಭರವಸೆಯನ್ನು ಎಡರಂಗ ನೀಡಿತ್ತು. ಆದರೆ ವಿಪರ್ಯಾಸವೆಂದರೆ ರುನು ಗುಹಾ ನಿಯೋಗಿಗೆ ಒಂದಲ್ಲ ಒಂದು ಬಡ್ತಿ ಸಿಗುತ್ತಲೇ ಹೋಗಿ ತಮ್ಮ ನಿವೃತ್ತಿಯ ಕೆಲವು ತಿಂಗಳಿಗೆ ಮುಂಚೆ ಡೆಪ್ಯುಟಿ ಕಮಿಷನರ್ ಹುದ್ದೆಗೆ ಏರಿದ್ದರು.

ಒಟ್ಟಾರೆಯಾಗಿ ಅರ್ಚನಾ ಗುಹಾ ಪ್ರಕರಣ ಪ್ರಸಕ್ತ ನ್ಯಾಯಾಂಗ ವ್ಯವಸ್ಥೆಯ ಕಷ್ಟಗಳು ಹಾಗೂ ಸಾಧ್ಯತೆಗಳತ್ತ ಬೊಟ್ಟು ಮಾಡಿದೆ.

*- ಸಂಗ್ರಹಾನುವಾದ : ಸಿ. ಜಿ. ಮಂಜುಳ*

ಪೊಕ್ರಾನ್ ಬಾಂಬ್ ಸ್ಫೋಟಿಸಿ ಒಂದು ವರ್ಷವಾದ ಸಂದರ್ಭದಲ್ಲಿ "ಜನಾಂದೋಲನಗಳ ರಾಷ್ಟ್ರೀಯ ಸಮನ್ವಯ - ಕರ್ನಾಟಕದವರು" ದಿನಾಂಕ 11-5-99ರಂದು ಮಧ್ಯಾಹ್ನ, ವೈ.ಎಂ.ಸಿ.ಎ.ನಲ್ಲಿ ವಿಚಾರ ಸಂಕಿರಣವನ್ನು ಏರ್ಪಡಿಸಿದ್ದರು. ವಿಚಾರ ಸಂಕಿರಣದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ, ರಾಜ್ಯಶಾಸ್ತ್ರ ವಿಭಾಗದ ಡಿ. ಜೀವನ್ ಕುಮಾರ್, ಪತ್ರಕರ್ತ ನಾಗೇಶ್ ಹೆಗ್ಗಡೆ ಮತ್ತು ಅಣುಶಕ್ತಿಯ ಪರ್ಯಾಯಗಳ ಬಗ್ಗೆ ಕೆಲಸ ಮಾಡುತ್ತಿರುವ CANE (Citizens for alternatives to nuclear energy) ಸಂಸ್ಥೆಯ ಶೇಖರ್ ಬಿರ್‌ಗಾಂವ್‌ಕರ್ ಅವರು ಮಾತನಾಡಿದರು.

ಜೀವನ್‌ಕುಮಾರ್ ಅವರು ಪೊಕ್ರಾನ್ ಸ್ಫೋಟಗಳು ರಾಷ್ಟ್ರೀಯ ಹಾಗು ಅಂತರರಾಷ್ಟ್ರೀಯ ಮಟ್ಟದಲ್ಲಿ ಹುಟ್ಟುಹಾಕಿರುವ ಪರಿಸ್ಥಿತಿಯನ್ನು ವಿವರಿಸಿದರು. NPT (ನಿಶ್ಶಸ್ತ್ರೀಕರಣ), CTBT (ಅಣ್ವಸ್ತ್ರ ಪರೀಕ್ಷೆ ನಿಷೇಧ ಕಾಯ್ದೆ)ಗಳು ತಾರತಮ್ಯದಿಂದ ಕೂಡಿರುವುದನ್ನು ಮತ್ತು ಬಿಜೆಪಿ ಸರ್ಕಾರ ರಾಷ್ಟ್ರೀಯ ಭದ್ರತೆಯ ಸೋಗಿನಲ್ಲಿ ಪೊಖ್ರಾನ್ ಸ್ಫೋಟವನ್ನು ತನ್ನ ರಾಜಕೀಯ ಉದ್ದೇಶಗಳಿಗಾಗಿ ಬಳಸಿಕೊಳ್ಳುತ್ತಿದೆ ಎಂಬುದನ್ನು ಹೇಳಿದರು. 175 ರಾಷ್ಟ್ರಗಳ ಸಾಮಾಜಿಕ-ಆರ್ಥಿಕ ಬೆಳವಣಿಗೆಯಲ್ಲಿ ಭಾರತ 135-145ರ ನಡುವಿನ ಸ್ಥಾನದಲ್ಲಿದೆ. ಇಂತಹ ಪರಿಸ್ಥಿತಿಯಲ್ಲಿ ಅಣ್ವಸ್ತ್ರಗಳ ತಯಾರಿಸಿದ್ದೇವೆಂದು ಬೀಗುವುದು ಸಮಂಜಸವಲ್ಲ. ಅಲ್ಲದೆ ಭಾರತದ ವಿದೇಶಾಂಗ ನೀತಿಯು ಯಾವಾಗಲೂ ಶಾಂತಿಯುತ ಸಹಬಾಳ್ವೆಗೆ ಒತ್ತು ನೀಡಿದೆ. ಮುಂದೆಯು ಅದು ಸಮಾನತೆ, ಸಾಮಾಜಿಕ ನ್ಯಾಯ, ಸಹಬಾಳ್ವೆಗೆ ಮಹತ್ವ ನೀಡಬೇಕೆಂದು ಹೇಳಿದರು.

ನಾಗೇಶ್ ಹೆಗಡೆಯವರು ಪೊಕ್ರಾನ್ ಸ್ಫೋಟಗಳನ್ನು ಕಟುವಾಗಿ ಟೀಕಿಸಿದರು. ಅಣ್ವಸ್ತ್ರೀಕರಣವು ನೈತಿಕ ನಪುಂಸಕತೆಗೆ ಎಡೆ ಮಾಡುತ್ತದೆ. ಆರ್ಥಿಕ ದಿಗ್ಬಂಧನದಂತಹ ಕಾರಣಗಳಿಂದಾಗಿ ಆರ್ಥಿಕ ಬಿಕ್ಕಟ್ಟು ಉಂಟಾಗಿದೆ. ಯುರೇನಿಯಂ ಗಣಿಗಾರಿಕೆಯಿಂದ ಹಿಡಿದು ಬಾಂಬ್ ತಯಾರಾಗುವವರೆಗಿನ ಪ್ರಕ್ರಿಯೆಯನ್ನು ವಿವರವಾಗಿ ತಿಳಿಸಿ ಅದು ಎಂತಹ ಅಪಾಯಕಾರಿಯಾದುದು, ಆರೋಗ್ಯಕ್ಕೆ ಹೇಗೆ ಹಾನಿಕರ ಎಂಬುದನ್ನು ವಿವರಿಸಿದರು. ಅಣು ಸ್ಥಾವರದಿಂದ ಕೈಗಾ ಸುತ್ತಮುತ್ತ ಉಂಟಾಗಿರುವ ಪರಿಸ್ಥಿತಿಯನ್ನು ಕುರಿತು ಮಾತನಾಡುತ್ತ ತಂತ್ರಜ್ಞಾನ ಸಾಮಾನ್ಯರನ್ನು ತಲುಪಬೇಕು, ಆಕಾಶವನ್ನಲ್ಲ ಎಂದು ತಿಳಿಸಿದರು.

ಶೇಖರ್ ಅವರು ಮಾತನಾಡಿ ಜನರ ಭಾಗವಹಿಸುವಿಕೆ ತುಂಬಾ ಮುಖ್ಯ ಎಂದು ಹೇಳಿದರು. ಪೊಕ್ರಾನ್ ಸ್ಫೋಟಗಳಿಗೆ ಪ್ರತಿಯೊಬ್ಬರು ಕಾರಣರಾಗುತ್ತೇವೆ. ತಮ್ಮ ಸಂಸ್ಥೆಯ ಉದ್ದೇಶಗಳನ್ನು ಕುರಿತು ಮಾತನಾಡಿದ ಅವರು ಅಣುಶಕ್ತಿ ಪ್ರಗತಿಗೆ ಸಾಧನವಲ್ಲ, ಮಾರಕ ಎಂದು ಹೇಳಿದರು. ಅಣುಶಕ್ತಿಗೆ ಪರ್ಯಾಯಗಳನ್ನು ಹುಡುಕುವ ಸಂಶೋಧನೆಯ ಅಗತ್ಯವಿದೆ ಎಂದು ಹೇಳಿದರು. ನಂತರ ಸಭೆಯಲ್ಲಿ ವಿಷಯ ಕುರಿತು ಚರ್ಚೆ ನಡೆಯಿತು.

ವರದಿ - ಅನಿತ ವಿ.

# ಬಿ.ಪಿ.ಎಲ್. ಕಾರ್ಮಿಕರ ಹೋರಾಟ

# ಸ್ತ್ರೀವಾದಿ ಸಂವೇದನೆಯ ಸ್ಫೋಟ

ಸಾರ್ವಜನಿಕ ವಲಯದ ಫ್ಯಾಕ್ಟರಿಗಳ ಪ್ರಮುಖ ಕೇಂದ್ರಗಳಲ್ಲೊಂದಾದ ಬೆಂಗಳೂರು, ಸಂಘಟಿತ ಕಾರ್ಮಿಕರ ಚರಿತ್ರಾರ್ಹ ಹೋರಾಟಗಳ ದಾಖಲೆಯನ್ನೇ ಸೃಷ್ಟಿಸಿದೆ. ಇಲ್ಲಿನ ಸಾರ್ವಜನಿಕ ವಲಯದ ಫ್ಯಾಕ್ಟರಿಗಳ ಕಾರ್ಮಿಕ ಸಂಘಟನೆಗಳ ಜಂಟಿ ಹೋರಾಟ ಒಕ್ಕೂಟವಾದ ಜಾಯಿಂಟ್ ಆ್ಯಕ್ಷನ್ ಕಮಿಟಿ (ಜೆಎಸಿ) ಹಲವು ಯಶಸ್ವಿ ಹೋರಾಟಗಳನ್ನು ಹಮ್ಮಿಕೊಂಡು ದೇಶದ ಗಮನವನ್ನೇ ಸೆಳೆದಿದೆ. ಐಟಕ್, ಇಂಟಕ್, ಸೀಟು, ಎಚ್ಚೆಮ್ಮೆಸ್, ಎಚ್ಚೆಮ್ಕೆಪಿ, ಯುಟಿಯುಸಿ (ಎಲ್‌ಎಸ್) ಮುಂತಾದ ಕಾರ್ಮಿಕ ಸಂಘಟನೆಗಳ ಜಂಟಿ ಹೋರಾಟ, ಸಾರ್ವಜನಿಕ ವಲಯದ ಕಾರ್ಮಿಕರ ಒಗ್ಗಟ್ಟನ್ನೂ ಸಾಬೀತು ಪಡಿಸಿದೆ.

ಆದರೆ, ಅಸಂಘಟಿತ ವಲಯದ ಕಾರ್ಮಿಕರ ಸಂಘಟನೆ ವಿಚಾರ ಮಾತ್ರ ತೀವ್ರ ನಿರ್ಲಕ್ಷ್ಯಕ್ಕೆ ತುತ್ತಾಗಿರುವುದು ನಿರ್ವಿವಾದ. ನೂರಕ್ಕೆ ತೊಂಬತ್ತು ಪಾಲು ಕಾರ್ಮಿಕರು ಅಸಂಘಟಿತ ವಲಯದಲ್ಲೇ ಇದ್ದರೂ, ಇವರತ್ತ ಯಾರ ಗಮನವೂ ಹರಿಯದಿರುವುದು ಕಠೋರ ಸತ್ಯ. ಅಸಂಘಟಿತ ಕಾರ್ಮಿಕರನ್ನು ಸಂಘಟಿಸುವ ಪ್ರಯತ್ನಗಳು ಅಲ್ಲೊಂದು ಇಲ್ಲೊಂದು ನಡೆದರೂ, ಅವರ ಹೋರಾಟಕ್ಕೆ ಮೊನಚು ಬಂದ ಉದಾಹರಣೆಗಳು ಇಲ್ಲವೆಂದೇ ಹೇಳಬೇಕು.

ಅಸಂಘಟಿತ ಕಾರ್ಮಿಕರನ್ನು ಸಂಘಟಿಸುವುದೇ ಇಷ್ಟೊಂದು ಕಷ್ಟಕರ ಇರುವಾಗ, ಇನ್ನು ಅಸಂಘಟಿತ ವಲಯದ ಮಹಿಳಾ ಕಾರ್ಮಿಕರನ್ನು ಸಂಘಟಿಸುವ ಮಾತು ದುಸ್ಸಾಹಸವೇ ಸೈ. ಆದರೆ ಈ ದಿಕ್ಕಿನಲ್ಲೂ ಕೆಲವಾರು ಪ್ರಯತ್ನಗಳು ನಡೆದಿವೆ; ಹಲವು ವಿಫಲಗೊಂಡರೆ, ಕೈಬೆರಳೆಣಿಕೆಯಷ್ಟು ಕೊಂಚ ಯಶಸ್ಸನ್ನು ಪಡೆದಿರಲು ಸಾಕು.

ಇಂಥ ಇತ್ತೀಚಿನ ಸಂಘಟಿತ ಹೋರಾಟ ಉದಾಹರಣೆ ಎಂದರೆ, ಬಿಪಿಎಲ್ ಕಾರ್ಮಿಕರ ಸಂಘಟನೆ ನಡೆಸಿದ ಹೋರಾಟ. ನೂರೈವತ್ತು ದಿನಕ್ಕೂ ಮಿಕ್ಕಿ, ಕೆ. ಆರ್. ಸರ್ಕಲ್ಲಿನಲ್ಲಿ ಮಳೆ, ಗಾಳಿ, ಬಿಸಿಲು, ಚಳಿಗೆ ಬೆದರದೆ ಸತ್ಯಾಗ್ರಹ ಕೈಗೊಂಡ ಈ ಮಹಿಳಾ ಕಾರ್ಮಿಕರ ದಿಟ್ಟ ಹೋರಾಟ ಎಲ್ಲರ ಗಮನ ಸೆಳೆದಿದೆ. ಮಹಿಳಾ ಕಾರ್ಮಿಕರನ್ನು ಸುಲಭವಾಗಿ ಶೋಷಿಸಬಹುದೆನ್ನುವ ಸಾಮಾನ್ಯ ತಿಳುವಳಿಕೆಯನ್ನು ಬಿಪಿಎಲ್ ಮಹಿಳಾ ಕಾರ್ಮಿಕರು ಹುಸಿಗೊಳಿಸಿದ್ದಾರೆ. ತಾವು ಬಾಯಿ ಮುಚ್ಚಿಕೊಂಡು ನಿಗದಿಪಡಿಸಿದಷ್ಟು ಕೆಲಸವನ್ನು ಮಾಡಿ ಹೋಗಲು ಮಾತ್ರ ಕೆಲಸಕ್ಕೆ ಬಂದಿರದೆ ದುಡಿಯುವ ವರ್ಗವಾಗಿ ತಮಗಿರುವ ಹಕ್ಕನ್ನು ಪಡೆದುಕೊಳ್ಳಲು, ಇದು ಸಿಗದಿದ್ದರೆ ಹೋರಾಟದ ಹಾದಿ ಹಿಡಿಯಲೂ ಸಿದ್ಧ ಎಂಬುದನ್ನು ಅವರು ನುಡಿಯಲ್ಲಿ ಹಾಗೂ ನಡೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಕೆಲಸಕ್ಕೆ ಸೇರಿರುವ ತಮ್ಮ ಧ್ಯೇಯ ಕೇವಲ ಸಂಬಳಕ್ಕಾಗಿ ಕೆಲಸ ಮಾಡುವುದು ಮಾತ್ರವಾಗಿರದೆ, ತಮ್ಮನ್ನು ನಂಬಿದವರಿಗೆ ನೆರವಾಗುವುದು ಮಾತ್ರವಾಗಿರದೆ, ತಮ್ಮ ಮದುವೆಗಾಗಿ, ವರದಕ್ಷಿಣೆ ಇತ್ಯಾದಿಗಾಗಿ ಹಣ ಕೂಡಿಸುವುದು ಮಾತ್ರವಾಗಿರದೆ, ಮನುಷ್ಯರಾಗಿ ತಮ್ಮ ಬದುಕನ್ನು, ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡು ಸಮಾಜದಲ್ಲಿ ಸಮಾನತೆ ಪಡೆಯುವುದೇ ತಮ್ಮ ಧ್ಯೇಯವಾಗಿದೆ ಎಂದೂ ಈ ಮಹಿಳಾ ಕಾರ್ಮಿಕರು ತಮ್ಮ ಹೋರಾಟದ ಮೂಲಕ ಸಾಬೀತುಪಡಿಸಿದ್ದಾರೆ.

ಬಿ.ಪಿ.ಎಲ್. ಕಂಪನಿಯು ಎಲೆಕ್ಟ್ರಾನಿಕ್ ಗೃಹಬಳಕೆ ವಸ್ತುಗಳನ್ನು - ವಿಶೇಷವಾಗಿ ಕಲರ್ ಟಿ.ವಿ.ಗಳನ್ನು - ಪೂರೈಸುವ ದೇಶದ ಪ್ರಮುಖ ಕಂಪನಿ. ತನ್ನ ವ್ಯಾಪಾರ, ವಹಿವಾಟು ಕೌಶಲ್ಯ ಹಾಗೂ ಚಾಕಚಕ್ಯತೆಯ ಜಾಹೀರಾತು ಜಾಲದಿಂದಾಗಿ, ಈ ಕ್ಷೇತ್ರದಲ್ಲಿ ಒಟ್ಟು ಸುಮಾರು ಶೇಕಡಾ 40ರಷ್ಟು ಸ್ವಾಮ್ಯವನ್ನು ಹೊಂದಿ, ದೇಶದ ವಿವಿಧ ಭಾಗಗಳಲ್ಲಿ ತನ್ನ ಉತ್ಪಾದನಾ ಘಟಕಗಳನ್ನು ಹೊಂದಿದೆ. ಬೆಂಗಳೂರು ಮತ್ತು ಸುತ್ತಮುತ್ತಲೇ 140ಕ್ಕೂ ಹೆಚ್ಚು ಘಟಕಗಳನ್ನು ಹೊಂದಿ, ವಿವಿಧ ಹಂತದ ಬಿಡಿ ಭಾಗಗಳ ಉತ್ಪಾದನೆ ಹಾಗೂ ಜೋಡಣೆ (ಅಸೆಂಬ್ಲಿಂಗ್) ನಡೆಸುತ್ತಿದ್ದು, ಒಟ್ಟು ಸುಮಾರು 4000ಕ್ಕೂ ಹೆಚ್ಚು ಕಾರ್ಮಿಕರನ್ನು ಇಟ್ಟುಕೊಂಡಿದೆ, ಇದರಲ್ಲಿ ಹೆಚ್ಚಿನವರು 25 ವರ್ಷಗಳನ್ನೂ ಸಹ ದಾಟದವರು; ಶೇಕಡಾ 90 ಭಾಗ 40 ವರ್ಷದೊಳಗಿನವರು, ಇದನ್ನು ಕಂಪನಿಯೇ ತನ್ನ ವರದಿಯಲ್ಲಿ ಹೆಮ್ಮೆಯಿಂದ ಹೇಳಿಕೊಂಡಿದೆ. ವರ್ಷಕ್ಕೆ ಸುಮಾರು 2,400

ಕೋಟಿ ರೂ. ವಾರ್ಷಿಕ ವಹಿವಾಟನ್ನು ಮಾಡುವ ಹೆಮ್ಮಾರಿ ಕಂಪನಿ ಇದು.

ಇಂಥ ಕಂಪನಿಯ ಕಾರ್ಮಿಕರನ್ನು ಸಂಘಟಿಸುವ ಪ್ರಯತ್ನಗಳು 1970 ಮತ್ತು 1980ರ ದಶಕಗಳಲ್ಲೇ ಆರಂಭವಾದರೂ, ಕಾರ್ಮಿಕ ಕಾಯ್ದೆಗಳು ಅಡ್ಡಿ ಬಂದು, ಆಡಳಿತ ವರ್ಗದ ಸಂಚು ಸಫಲಗೊಂಡು, ಕಾರ್ಮಿಕರು ಸಂಘಟನೆಯಾಗುವುದು ಸಾಧ್ಯವಾಗಲೇ ಇಲ್ಲ. ಆದರೆ ಕಳೆದ ವರ್ಷ ಸಿ.ಪಿ.ಎಂ. ಪಕ್ಷದ ಕಾರ್ಮಿಕ ಸಂಘಟನೆ ಸೀಟು (ಸೆಂಟರ್ ಫಾರ್ ಇಂಡಿಯನ್ ಟ್ರೇಡ್ ಯೂನಿಯನ್ಸ್) ಒತ್ತಾಸೆಯಲ್ಲಿ ಬಿ.ಪಿ.ಎಲ್. ಕಾರ್ಮಿಕರು ಸಂಘಟನೆಯಾಗೇಬಿಟ್ಟರು; ಆಡಳಿತ ವರ್ಗದ ಮನಸೋ ಇಚ್ಛೆ ನೀತಿ ಹಾಗೂ ನಿಯಮಗಳ ವಿರುದ್ಧ ದನಿ ಎತ್ತಿದರು; ಕಳೆದ ನವೆಂಬರ್‌ನಲ್ಲಿ ತಾವು ಮುಷ್ಕರ ಹೂಡುವುದಾಗಿ ಆಡಳಿತ ವರ್ಗಕ್ಕೆ ನೋಟೀಸು ನೀಡೇಬಿಟ್ಟರು.

ಆಡಳಿತ ವರ್ಗ ಕೂಡಲೇ ಕಾರ್ಯ ಪ್ರವತ್ತವಾಯಿತು; ಮೊದಲು ಕನಿಷ್ಠ ವೇತನವನ್ನು ಜಾರಿಗೊಳಿಸಿತು. ಕಾಯ್ದೆಬದ್ಧವಾದ ಅಗತ್ಯಗಳನ್ನು ನಾಮಕಾವಾಸ್ತೆಯಾದರೂ ಪೂರೈಸಿತು. ಕಾರ್ಮಿಕರನ್ನು ಒಡೆಯಲು ಪ್ರಯತ್ನಿಸಿತು. ಕಾರ್ಮಿಕರು ತಮ್ಮ ಕುಂದು ಕೊರತೆಗಳನ್ನು ಖುದ್ದಾಗಿ, ನೇರವಾಗಿ ಆಡಳಿತ ವರ್ಗದ ಬಳಿ ತರಬೇಕೆಂದೂ, ಎಲ್ಲಾ ಬೇಡಿಕೆಗಳನ್ನು ಸಹಾನುಭೂತಿಯಿಂದ ಹಾಗೂ ಮಾನವೀಯತೆಯಿಂದ ಪರಿಹರಿಸಲಾಗುವುದೆಂದೂ ಪ್ರಚಾರ ಮಾಡಿತು. ಕಾರ್ಮಿಕರು ಸಂಘರ್ಷಕ್ಕಿಳಿಯಬಾರದೆಂದು ಕಿವಿಮಾತು ಹೇಳಿತು. ಆದರೂ ಕಾರ್ಮಿಕ ಸಂಘ, ಕಾರ್ಮಿಕರಿಗೆ ನ್ಯಾಯಬದ್ಧವಾಗಿ ಸಿಕ್ಕಬೇಕಾದ ಬೇಡಿಕೆಗಳನ್ನು ಮಂಡಿಸಿ, ಕಾರ್ಮಿಕ ವಿರೋಧಿ ನೀತಿ ಅನುಸರಿಸುತ್ತಿರುವ ಕಂಪನಿಯ ಆಡಳಿತ ವರ್ಗದಿಂದ ನ್ಯಾಯ ಕೊಡಿಸಲು ಲೇಬರ್ ಕೋರ್ಟಿಗೆ ಮೊರೆ ಹೋಯಿತು. ಲೇಬರ್ ಕೋರ್ಟು ಅಂದರೆ ಸರ್ಕಾರ ಕಿವಿ-ಕಣ್ಣು ಮುಚ್ಚಿಕೊಂಡು ಕುಳಿತಿತು.

ಕಾರ್ಮಿಕರು ಮುಷ್ಕರ ನಡೆಸುವುದೇ ಕಾನೂನುಬಾಹಿರ ಎಂದು ಮೊದಲು ಕಂಪನಿ ಕೋರ್ಟಿಗೆ ತಿಳಿಸಿತು; ನಂತರ ಕಾರ್ಮಿಕ ಸಂಘ ಮನ್ನಣೆ ಪಡೆದಿಲ್ಲ ಎಂದು ತಕರಾರು ತೆಗೆಯಿತು; ಈ ಬಗ್ಗೆ ಕಾರ್ಮಿಕ ಸಂಘವು ಕೋರ್ಟಿನಿಂದಲೇ ತಡೆಯಾಜ್ಞೆ ಪಡೆದು ಬಂದ ಬಳಿಕ, ಮುಷ್ಕರ ನಿರತ ಮಹಿಳಾ ಕಾರ್ಮಿಕರನ್ನು ವಜಾ ಮಾಡುವ ಮಟ್ಟಕ್ಕೆ ಆಡಳಿತ ವರ್ಗ ಇಳಿಯಿತು; ವಜಾ ಆದ ಕಾರ್ಮಿಕರ ಸಂಖ್ಯೆ 800ನ್ನೂ ದಾಟಿತು. ಆದರೆ, ಮಹಿಳಾ ಕಾರ್ಮಿಕರ ದಂಡು ಕೆ.ಆರ್. ಸರ್ಕಲ್ಲಿನಲ್ಲಿ ದಿನನಿತ್ಯ ಹೆಚ್ಚಿನ ಸಂಖ್ಯೆಯಲ್ಲಿ ಸೇರತೊಡಗಿತು; ಬಿಪಿಎಲ್ ಕಾರ್ಮಿಕರ ಸಂಘಕ್ಕೆ ಸೀಟೂಗೆ ಸೇರ್ಪಡೆಯಾದ ಇತರ ಕಾರ್ಮಿಕರ ಸಂಘಗಳೂ ಮುಷ್ಕರಕ್ಕೆ ಬೆಂಬಲ ನೀಡಿದವು; ಭೂತದಹನ, ಪಿಕೆಟಿಂಗ್, ಉರುಳುಸೇವೆ ಮುಂತಾದ ವಿವಿಧ ರೀತಿಯ ಕಾರ್ಯಕ್ರಮಗಳು ಮುಗಿದವು; ಸಿಪಿಎಂ ಶಾಸಕ ಸದನದಲ್ಲಿ ವಿಷಯ ಪ್ರಸ್ತಾಪಿಸಿದರು; ಸಿಪಿಎಂ ರಾಜ್ಯ ಕಾರ್ಯದರ್ಶಿ, ಮುಖ್ಯಮಂತ್ರಿ ಮತ್ತು ಕಾರ್ಮಿಕ ಮಂತ್ರಿ ಭೇಟಿಯಾದರು; ವಿಷಯ ಚರ್ಚೆಯಾಯಿತು; ರಾಜಿ ಸೂತ್ರ ಸಿದ್ಧವಾಯಿತು; ಆದರೆ ಕೊನೆ ಗಳಿಗೆಯಲ್ಲಿ ಆಡಳಿತ ವರ್ಗವು ತಾನೇ ಒಪ್ಪಿಕೊಂಡಿದ್ದ ರಾಜಿ ಸೂತ್ರ ಉಲ್ಲಂಘಿಸಿ, ತನ್ನ ಕಾರ್ಮಿಕ ವಿರೋಧಿ, ನೀತಿಯನ್ನು ಮೆರೆಯಿತು.

ಬಿ.ಪಿ.ಎಲ್. ಕಂಪನಿಯ ಪ್ರತಿ ಘಟಕದಲ್ಲಿ ಆಯಾ ಪ್ರದೇಶಗಳವರಲ್ಲದ, ಯುವತಿಯರನ್ನು ನೇಮಕ ಮಾಡಿಕೊಳ್ಳಲಾಗಿದೆ. 'ಪುರುಷರಾದರೆ ಅವರನ್ನು ನಿಭಾಯಿಸುವುದು ಕಷ್ಟ; ಮದುವೆಯಾದ ಮಹಿಳೆಯರಾದರೆ ಅವರ ಸಾಂಸಾರಿಕ ಸಮಸ್ಯೆಗಳಿಗೆ ಆಡಳಿತ ವರ್ಗ ಕಿವಿಗೊಡಬೇಕಾಗುತ್ತದೆ. ಆದ್ದರಿಂದ, ಕಂಪನಿಯಲ್ಲಿ ಉತ್ಪಾದನೆ ಗರಿಷ್ಠ ಪ್ರಮಾಣದಲ್ಲಿ ಆಗಬೇಕೆಂದರೆ, ಅವಿವಾಹಿತ ಯುವತಿಯರು ಅದೂ ಕಂಪನಿಯ ಘಟಕದಿಂದ ಬಹುದೂರ ಮನೆಯಿರುವವರಾದರೆ ಉತ್ತಮ' ಎಂಬುದು ಕಂಪನಿಯ ನೀತಿ! ಇಷ್ಟಕ್ಕೂ, ಈ ಯುವತಿಯರಿಗೆ ಕೆಲಸದ ಅವಧಿಯಲ್ಲಿ ಸೂಕ್ತವಾದ ಶೌಚಾಲಯ, ಊಟೋಪಹಾರ ಸೌಲಭ್ಯಗಳನ್ನೂ ಒದಗಿಸದಷ್ಟು ನೀಚ ಮಟ್ಟಕ್ಕೆ ಕಂಪನಿ ಇಳಿಯಿತು.

ಈ ಮಧ್ಯೆ ಕಾರ್ಮಿಕ ಸಂಘ ಹಾಗೂ ಆಡಳಿತ ವರ್ಗ ಪರಸ್ಪರರ ಮೇಲೆ ಹಿಂಸಾಚಾರದ ಆರೋಪ ಹೊರಿಸಲಾರಂಭಿಸಿದವು; ಕಂಪನಿ ಬಸ್‌ಗಳಿಗೆ ಬೆಂಕಿ ಬಿತ್ತು; ಕಾರ್ಮಿಕ ಸಂಘಗಳವರು ಬೆಂಕಿ ಇಟ್ಟರು ಎಂದು ಆಡಳಿತವರ್ಗ ಆರೋಪಿಸಿದರೆ, ತನ್ನ ಬಸ್‌ಗಳಿಗೆ ತಾನೇ ಬೆಂಕಿ ಇಟ್ಟುಕೊಂಡು ಕಾರ್ಮಿಕ ಸಂಘಕ್ಕೆ ಮಸಿ ಬಳಿಯಲು ಕಂಪನಿ ಯತ್ನಿಸುತ್ತಿದೆ ಎಂದು ಕಾರ್ಮಿಕ ಸಂಘದ ಪದಾಧಿಕಾರಿಗಳು ಹೇಳಿದರು. ಈ ಬೆಂಕಿ ಹಚ್ಚುವಿಕೆಗೆ ಇಬ್ಬರು ಮಹಿಳಾ ಕಾರ್ಮಿಕರು ಬಲಿಯಾದದ್ದೊಂದು ದುರಂತವೇ ಸೈ.

ಮುಷ್ಕರ ಈಗ ಮುಗಿದಿದೆ; ಮಹಿಳಾ ಕಾರ್ಮಿಕರು ಮತ್ತೆ ಕೆಲಸಕ್ಕೆ ಹೋಗಲಾರಂಭಿಸಿದ್ದಾರೆ; ತಾತ್ಕಾಲಿಕವಾಗಿ ಸಮಸ್ಯೆ ಇತ್ಯರ್ಥವಾಗಿದೆ. ಆದರೆ ಅಸಂಘಟಿತ ಮಹಿಳಾ ಕಾರ್ಮಿಕರ ಬೆವರಿನ ಕೊಳ್ಳೆ ಹೊಡೆದು ರುಚಿ ಕಂಡಿರುವ ಆಡಳಿತ ವರ್ಗ, ಕಾರ್ಮಿಕರ ಹಿತಾಸಕ್ತಿಯನ್ನು ಎಷ್ಟರ ಮಟ್ಟಿಗೆ ಕಾಪಾಡೀತು? ಅಸಂಘಟಿತ ಮಹಿಳಾ ಕಾರ್ಮಿಕರನ್ನು ತನ್ನ ಶಕ್ತಿಯಾಗಿಸಿಕೊಂಡ ಕಾರ್ಮಿಕ ಸಂಘಟನೆ ಇದನ್ನು ಆರ್ಥಿಕೇತರ ಅಸಮಾನತೆ ನಿರ್ಮೂಲನೆಗೆ ಎಷ್ಟರ ಮಟ್ಟಿಗೆ ಬಳಸಿಕೊಳ್ಳಲು ಮುಂದಾದೀತು? ಇವು ಮಂದಿನ ದಿನಗಳಲ್ಲಿ ಗಮನಕ್ಕೆ ಬರಲಿರುವ ಮಹತ್ವದ ಪ್ರಶ್ನೆಗಳು.

ಏನೇ ಆದರೂ, ಬಿಪಿಎಲ್ ಕಾರ್ಮಿಕರ ಸಂಘದ ಹೋರಾಟವು ಒಂದು ವಿಷಯವನ್ನಂತೂ ಸ್ಪಷ್ಟಪಡಿಸಿದೆ; ಮಹಿಳಾ ಕಾರ್ಮಿಕರ ಸಂಘವು ಕೇವಲ ಆರ್ಥಿಕ ಬೇಡಿಕೆಗಳಿಗಾಗಿ ಮಾತ್ರ ತನ್ನ ಆತ್ಮಸ್ಥೈರ್ಯವನ್ನು ಪ್ರಕಟಿಸಿತೆಂದು ತೀರ್ಮಾನಿಸುವುದು ಒಂದು ಹೋರಾಟಕ್ಕೆ ಬಗೆಯುವ ಅಪಚಾರವೂ ಹೌದು; ಏಕೆಂದರೆ, ಹೀಗೆ ತೀರ್ಮಾನಿಸುವುದು ಇಲ್ಲಿ ಮೂಡಿದ ಒಗ್ಗಟ್ಟಿನ ಹಿಂದೆ ಅದಮ್ಯ ಆತ್ಮಸ್ಥೈರ್ಯವಿದೆ; ಈ ಆತ್ಮಸ್ಥೈರ್ಯಕ್ಕೆ ಮಾನವೀಯತೆಯ ಸಿಂಚನ ಸಿಕ್ಕಿದೆ; ಆದ್ದರಿಂದ, ಈ ಹೋರಾಟವು ಸ್ತ್ರೀವಾದಿ ಸಂವೇದನೆಯ ಸ್ಫೋಟವನ್ನೂ ಕಾಣಿಸಬಹುದಾಗಿದೆ.

*ಶಾರದ-ವಿಜಯ*

## ಉದಾರೀಕರಣ : ಮೀನುಗಾರರ ಬದುಕಿಗೆ ಸಂಚಕಾರ

ಕೇಂದ್ರವು ರೂಪಿಸಿರುವ ಆರ್ಥಿಕ ಉದಾರೀಕರಣದ ಪರಿಣಾಮವಾಗಿ ಈಗಾಗಲೇ ದೇಶದ ಕರಾವಳಿಯಲ್ಲಿ ಬೀಡುಬಿಟ್ಟಿರುವ ಸುಮಾರು 38 ವಿದೇಶಿ ಕಂಪನಿಗಳ 200ಕ್ಕೂ ಹೆಚ್ಚು ಮೀನುಗಾರಿಕಾ ನೌಕೆಗಳು, ರಾಷ್ಟ್ರದ ಸಾಂಪ್ರದಾಯಿಕ ಮೀನುಗಾರಿಕೆಗೆ ಬಲವಾದ ಹೊಡೆತ ನೀಡಿವೆ. ವಿದೇಶಿ ನೌಕೆಗಳ ಅತ್ಯಾಧುನಿಕ ಮೀನುಗಾರಿಕೆ ಸೌಲಭ್ಯಗಳಿಂದಾಗಿ ಮೀನಿನ ಕ್ಷಾಮ ಉಂಟಾಗಿದೆ. ವಿದೇಶೀ ಟ್ರಾಲರ್‌ಗಳು ಸರಕಾರದ ನಿಯಮವನ್ನು ಮೀರಿ ಕರಾವಳಿಯ ಬಳಿಯಲ್ಲೇ ಮೀನುಗಾರಿಕೆ ನಡೆಸುತ್ತಿವೆ. ಈ ಬಗ್ಗೆ ಮೀನುಗಾರರು ಪದೇ ಪದೇ ನೀಡಿದ ದೂರುಗಳ ಬಗ್ಗೆ ಯಾವುದೇ ತನಿಖೆಯಾಗಿಲ್ಲ. ವಿದೇಶಿ ಟ್ರಾಲರ್‌ಗಳ ಮೀನುಗಾರಿಕೆಯ ಮೇಲೆ ಕಣ್ಗಾವಲು ಹಾಕುವ ಯಾವ ವ್ಯವಸ್ಥೆಯೂ ಇಲ್ಲ.

ರಾಜ್ಯದಲ್ಲಿ ಸುಮಾರು 3,50,000 ಮೀನುಗಾರರಿದ್ದಾರೆ. ರಾಜ್ಯದ ಮುಖ್ಯ ಮೀನುಗಾರಿಕಾ ಪ್ರದೇಶ ಮಂಗಳೂರು ತಾಲ್ಲೂಕು. ಇಲ್ಲಿ 10 ಸಾವಿರ ಕುಟುಂಬಗಳು ಪ್ರತ್ಯಕ್ಷವಾಗಿ ಹಾಗೂ 30 ಸಾವಿರ ಕುಟುಂಬಗಳು ಪರೋಕ್ಷವಾಗಿ ಮೀನುಗಾರಿಕೆಯನ್ನು ಅವಲಂಬಿಸಿವೆ. ಇಲ್ಲಿ ಯಾಂತ್ರೀಕೃತ ದೋಣಿಗಳನ್ನು ಹೊಂದಿರುವವರೇ ಹೆಚ್ಚು. ಕಳೆದ ಎರಡು ವರ್ಷಗಳಿಂದ ಕರಾವಳಿಯಲ್ಲಿ ತೀವ್ರ ಮತ್ಸ್ಯ ಕ್ಷಾಮ ತಲೆದೋರಿದೆ.

ಮೀನುಗಾರಿಕಾ ರಂಗದ ಬಗ್ಗೆ ರಾಜ್ಯ ಸರ್ಕಾರ ಕೊಂಚ ರಿಯಾಯ್ತಿ ನೀಡಿದೆ; ಆದರೆ ಕೇಂದ್ರ ಸರ್ಕಾರ ತನ್ನ ಮುಂಗಡ ಪತ್ರದಲ್ಲಿ ಈ ರಂಗವನ್ನು ಪೂರ್ತಿಯಾಗಿ ನಿರ್ಲಕ್ಷಿಸಿದೆ. ಇದು ಸಾಲದೆಂಬಂತೆ ಡೀಸೆಲ್ ದರವನ್ನು ಹೆಚ್ಚಿಸುವ ಮೂಲಕ ಮೀನುಗಾರರನ್ನು ಹೊಸಕಿಹಾಕಲು ಹೊರಟಂತಿದೆ.

ದೇಶಕ್ಕೆ ಅತ್ಯಧಿಕ ವಿದೇಶಿ ವಿನಿಮಯ ತಂದುಕೊಡುವ ರಂಗಗಳಲ್ಲಿ ಮೀನುಗಾರಿಕೆ ಪ್ರಮುಖವಾದುದು; ಮೀನು ರಫ್ತು ಹೆಚ್ಚಾದಾಗ ವಿದೇಶಿ ವಿನಿಮಯ ಬಾಚಿಕೊಂಡ ಕೇಂದ್ರ ಸರ್ಕಾರ, ಈ ರಂಗಕ್ಕೆ ಸಂಕಟ ಬಂದೊದಗಿದಾಗ ನೆರವಿಗೆ ಧಾವಿಸದಿರುವುದು ಘೋರ ಅನ್ಯಾಯ.

# ಗರ್ಭ ನಿರೋಧಕ ಲಸಿಕೆ - ಬೇಕೆ?

ಲಕ್ಷ್ಮೀ ಮೂರ್ತಿ

ಹೊಸದಿಲ್ಲಿಯ 'ನ್ಯಾಶನಲ್ ಇನ್‌ಸ್ಟಿಟ್ಯೂಟ್ ಆಫ್ ಇಮ್ಯುನಾಲಜಿ'ಯಲ್ಲಿ ಹಲವಾರು ದೇಶಗಳ ವಿಜ್ಞಾನಿಗಳು ಹಾಗೂ ವೈದ್ಯರು ಒಟ್ಟು ಸೇರಿ 'ರಿಪ್ರೊಡಕ್ಟಿವ್ ಇಮ್ಯುನಾಲಜಿ'ಯಲ್ಲಿ ನಡೆಯುತ್ತಿರುವ ಸಂಶೋಧನೆಯ ಬಗ್ಗೆ ಚರ್ಚಿಸಿದರು.

ಜನಸಂಖ್ಯೆ ನಿಯಂತ್ರಣಕ್ಕಾಗಿ ತಯಾರಿಸಲಾದ ಗರ್ಭ ನಿರೋಧಕ ಲಸಿಕೆಗಳ ಇತ್ತೀಚಿನ ಸಂಶೋಧನೆ ಹಾಗೂ ಬೆಳವಣಿಗೆಯ ಬಗ್ಗೆ ವ್ಯಾಪಕ ಚರ್ಚೆ ನಡೆಯಿತು. ಲಸಿಕೆಯ ಪರಿಣಾಮಕಾರಿಯಾದ, ನಂಬಲರ್ಹವಾದ, ಸುರಕ್ಷಿತವಾದ ಮತ್ತು ಅದನ್ನು ಉಪಯೋಗಿಸಿದ ನಂತರ ಹುಟ್ಟುವ ಮಕ್ಕಳ ದೈಹಿಕ ಹಾಗೂ ಮಾನಸಿಕ ಆರೋಗ್ಯದ ಬಗ್ಗೆ ಖಾತರಿ ಕೊಡುವಂತಹುದಲ್ಲ. ಈ ನಿಟ್ಟಿನಲ್ಲಿ ಮೂರು ದಶಕಗಳಿಂದ ಸಂಶೋಧನೆ ನಡೆಯುತ್ತಿದ್ದರೂ ಕೆಲವು ನ್ಯೂನತೆಗಳು ಕಂಡುಬಂದಿವೆ. ಅವು ಯಾವುವೆಂದರೆ,

1. ಅಲ್ಪ ಪರಿಣಾಮಕಾರಿ (ಶೇಕಡಾ 80ಕ್ಕಿಂತ ಕಡಿಮೆ)
2. ದೇಹದ ರಕ್ಷಣಾ ವ್ಯವಸ್ಥೆಯಲ್ಲಿ ಏರುಪೇರು
3. ಲಸಿಕೆಯು ಸಂಪೂರ್ಣ ಪರಿಣಾಮಕಾರಿ ವಿಧಾನವೆಂದು ಸಾಬೀತಾಗುವ ಮುಂಚೆಯೇ ಪ್ರಯೋಗಿಸುವುದು.
4. ಸ್ತ್ರೀ ಮಾನಸಿಕವಾಗಿ ಇಷ್ಟಪಡದಿದ್ದಲ್ಲಿ ಅದನ್ನು ತೆಗೆದುಕೊಳ್ಳುವಾಗ ದುಷ್ಪರಿಣಾಮಗಳ ಅನುಭವವಾದರೆ ನಿಲ್ಲಿಸುವ ಸ್ವಾತಂತ್ರ್ಯವಿಲ್ಲ.

ಮಹಿಳೆಯರನ್ನು ದುಷ್ಪರಿಣಾಮಗಳಿಗೆ ಒಡ್ಡುವುದು ನ್ಯಾಯಯುತವೆ? ಈ ಲಸಿಕೆಯ ಪ್ರಯೋಗದಿಂದ ದೇಹದಲ್ಲಿ ಅಲರ್ಜಿಯಂತಹ ತೊಂದರೆಗಳು (ಜೀವಕ್ಕೆ ಅಪಾಯ ತರುವಂತಹವುಗಳು), ರೋಗ ನಿರೋಧಕ ಶಕ್ತಿ ಕುಂದಿ ಹಲವಾರು ಸೋಂಕುಗಳಿಗೀಡಾಗುವುದು ಹಾಗೂ ಶಾಶ್ವತ ಬಂಜೆತನ ಉಂಟಾಗಬಹುದು.

ಗರ್ಭ ನಿರೋಧಕ ಲಸಿಕೆಗಳು ಯೋಗ್ಯವೋ, ಅಲ್ಲವೋ ಎಂಬುದರ ಬಗ್ಗೆ ಚಿಂತಿಸಬೇಕಾಗಿದೆ. ಈ ವಿಧಾನವನ್ನು ಸ್ತ್ರೀಯ ಒಪ್ಪಿಗೆ ಇರಲಿ ಅಥವಾ ಇಲ್ಲದಿರಲಿ ಸುಲಭವಾಗಿ, ವ್ಯಾಪಕವಾಗಿ ನೀಡಬಹುದಾಗಿದೆ. ಸಂಶೋಧನೆಯ ಗುರಿಯೇನೆಂದರೆ ಒಂದು ಬಾರಿ ಲಸಿಕೆ ಪ್ರಯೋಗ ಮಾಡಿದರೆ ಕನಿಷ್ಠ ಒಂದರಿಂದ ಎರಡು ವರ್ಷಗಳಾದರೂ ಪರಿಣಾಮ ಬೀರುವಂತಿರಬೇಕು. ಮಧ್ಯದಲ್ಲಿ ಅದರಿಂದುಂಟಾಗುವ ದುಷ್ಪರಿಣಾಮಗಳನ್ನು ನಿಲ್ಲಿಸುವುದು ಅಸಾಧ್ಯವಾದುದು. ಮುಖ್ಯವಾಗಿ ಲಸಿಕೆಯ ದುರುಪಯೋಗವಾಗದಂತೆ ನೋಡಿಕೊಳ್ಳುವುದು ಅವಶ್ಯಕ.

ಆದರೆ ಗರ್ಭ ನಿರೋಧಕ ಲಸಿಕೆಯ ಸಂಶೋಧನೆಯು ಸಾಮಾಜಿಕ ಹಾಗೂ ನೈತಿಕವಾಗಿ ಕೆಟ್ಟ ಪರಿಣಾಮ ಬೀರುವುದು ಚರ್ಚೆಯಲ್ಲಿ ಯಾರ ಗಮನಕ್ಕೂ ಬರಲಿಲ್ಲ. ಜನಸಂಖ್ಯೆ ನಿಯಂತ್ರಣದ ಉದ್ದೇಶಕ್ಕಾಗಿ ಮಹಿಳೆಯರು ಅಪಾಯಕರ ಗರ್ಭನಿರೋಧಕ ವಿಧಾನಗಳಿಗೆ ಬಲಿಪಶುವಾಗುತ್ತಿದ್ದಾರೆ.

ಸಂಶೋಧನೆಯ ವಿಷಯ ಜನರ ಆರೋಗ್ಯ ರಕ್ಷಣೆ ಮಾಡುವುದರ ಬಗ್ಗೆ ಹಾಗೂ ಗರ್ಭಧಾರಣೆ ಬಗ್ಗೆ ಸ್ವಯಂ ನಿರ್ಧಾರ ತೆಗೆದುಕೊಳ್ಳುವಂತಹದರ ಬಗ್ಗೆ ಇರಬೇಕಾದುದು ಅವಶ್ಯಕ.

**ಗರ್ಭ ನಿರೋಧಕ ಲಸಿಕೆಯ ನಿರ್ಬಂಧ**

ಅನೇಕ ಮಹಿಳಾ ಸಂಘಟನೆಗಳ ಸದಸ್ಯರು ದೆಹಲಿಯಲ್ಲಿ ಅಂತರಾಷ್ಟ್ರೀಯ ಪ್ರತಿರಕ್ಷಣಾ ವಿಜ್ಞಾನ ಸಮ್ಮೇಳನದ ಉದ್ಘಾಟನೆ ನಡೆಯುವ ಸ್ಥಳದ ಹೊರಗೆ ಗರ್ಭ ನಿರೋಧಕ ಲಸಿಕೆಯ ಅನೈತಿಕ ಸಂಶೋಧನೆ ಮತ್ತು ಅದರ ಬೆಳವಣಿಗೆಯ ಮೇಲೆ ಶೀಘ್ರವೇ ನಿರ್ಬಂಧ ವಿಧಿಸಬೇಕೆಂದು ಒತ್ತಾಯಿಸಿದರು. ಏಕೆಂದರೆ ಇದು ಮಹಿಳೆಯರ ಸ್ವಾಸ್ಥ್ಯಕ್ಕೆ ಹಾನಿಕರವಾಗಿದೆ ಮತ್ತು ಅದರಿಂದಾಗುವ ದುಷ್ಪರಿಣಾಮಗಳು ಅಧಿಕ. ಈ ಮೂಲಕ ಜನಸಂಖ್ಯೆ ನಿಯಂತ್ರಣ ಮಾಡಲು ಹೊರಟಿರುವುದು ಜನ ವಿರೋಧಿ ಮತ್ತು ಮಹಿಳಾ ವಿರೋಧಿ ನೀತಿಯೆಂದು ಪ್ರತಿಪಾದಿಸಿದ್ದಾರೆ.

ಸಮ್ಮೇಳನದಲ್ಲಿ ಸೇರಿದ ವಿಜ್ಞಾನಿಗಳಿಗೆ ಈ ಗರ್ಭ ನಿರೋಧಕ ಲಸಿಕೆ ಸಾಮಾಜಿಕ ಹಾಗೂ ನೈತಿಕವಾಗಿ ನ್ಯಾಯಯುತವಾಗಿವೆ ಎಂದು ಮಹಿಳಾ ಸಂಘಟನೆಗಳಿಗೆ ದೃಢಪಡಿಸಲು ಸಾಧ್ಯವಾಗಲಿಲ್ಲ.

ಮಹಿಳಾ ಸಂಘಟನೆಗಳು ಹೇಳುವುದೇನೆಂದರೆ - ಗರ್ಭ ನಿರೋಧಕ ಲಸಿಕೆಯ ವಿರುದ್ಧ ಹೋರಾಡುತ್ತಿರುವ ಉದ್ದೇಶವು ಮಹಿಳೆ 'ಗರ್ಭ ಧರಿಸುವುದೇ ಒಂದು ರೋಗ' ಎಂದು ಪರಿಗಣಿಸುತ್ತಿರುವುದರಿಂದ ಹಾಗೂ ಈ ಲಸಿಕೆಯ ಪ್ರಯೋಗದಿಂದ ಸ್ತ್ರೀಯರ ದೇಹದ ರೋಗ ನಿರೋಧಕ ಶಕ್ತಿ ಕುಗ್ಗಿ ಅನೇಕ ರೋಗಗಳಿಗೆ ಬಲಿಯಾಗುವುದಲ್ಲದೇ ಶಾಶ್ವತವಾಗಿ ಬಂಜೆತನವೂ ಉಂಟಾಗಬಹುದಾದ್ದರಿಂದ ಲಸಿಕೆಯ ಸಂಶೋಧನೆಯನ್ನು ನಿಲ್ಲಿಸಲೇಬೇಕೆಂಬುದಾಗಿದೆ.

ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನಿರ್ಬಂಧಿಸಿದ ಲಸಿಕೆಗಳನ್ನು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಸ್ತ್ರೀಯರ ಮೇಲೆ ಪರೀಕ್ಷಿಸಲು ಉಪಯೋಗಿಸಲಾಗುತ್ತಿದೆ. ಇವುಗಳನ್ನು ಹೆಚ್ಚಾಗಿ ಅನಕ್ಷರಸ್ಥ ಮಹಿಳೆಯರ ಮೇಲೇ ಪ್ರಯೋಗಿಸಲಾಗುತ್ತಿದೆ. ಅವರಿಗೆ ಅದರಿಂದುಂಟಾಗುವ ದುಷ್ಪರಿಣಾಮಗಳ ಬಗ್ಗೆ ಅರಿವೇ ಇರುವುದಿಲ್ಲ. ಗರ್ಭ ನಿರೋಧಕಗಳು ಸುರಕ್ಷಿತವಾಗಿರಬೇಕಲ್ಲದೇ ಅದರ ಬಗ್ಗೆ ಮಹಿಳೆಯರಿಗೆ ಸಂಪೂರ್ಣ ಜ್ಞಾನವಿರಬೇಕಾದುದು ಬಹು ಮುಖ್ಯ. ಹೆಚ್.ಸಿ.ಜಿ. ವಿರೋಧಿ ಲಸಿಕೆಯನ್ನು ದೆಹಲಿ, ಮುಂಬಯಿ, ಚಂಡೀಘಡದಲ್ಲಿ ಮಹಿಳೆಯರ ಮೇಲೆ ಪ್ರಯೋಗಾತ್ಮಕವಾಗಿ ನೀಡಲಾಗುತ್ತಿದೆ. ಪ್ರಾಯೋಗಿಕ ಹಂತದಲ್ಲೇ ಅವರ ಮೇಲೆ ಉಂಟಾಗುವ ತೊಂದರೆಗಳು ಅಧಿಕ. ಈ ಲಸಿಕೆಯ ಸುರಕ್ಷತೆಯ ಬಗ್ಗೆ ಯಾವುದೇ ಆಧಾರಗಳಿಲ್ಲ. ಇದು ಗರ್ಭಿಣಿಯರ ಮೇಲೆ ಹಾಗೂ ನಂತರ ಹುಟ್ಟುವ ಮಕ್ಕಳ ಮೇಲೆ ಉಂಟಾಗುವ ಪರಿಣಾಮಗಳ ಬಗ್ಗೆಯೂ ಸಂಶೋಧನೆ ಏನನ್ನು ತಿಳಿಸಿಲ್ಲ.

ದೆಹಲಿಯಲ್ಲಿರುವ ಮಹಿಳಾ ಸಂಘಟನೆ ಸಹೇಲಿಯು ಹೇಳುತ್ತಿರುವುದೇನೆಂದರೆ 'ಪ್ರಪಂಚದೆಲ್ಲೆಡೆ ಕ್ರೂರವಾದ ಸಂಶೋಧನೆ ನಡೆಯುತ್ತಿದೆ. ಗರ್ಭನಿರೋಧಕ ಲಸಿಕೆಗೆ ಸ್ತ್ರೀ ದೇಹ ಉಚಿತವಾಗಿ ಗುರಿಯಾಗುವ ಸ್ಥಳವಾಗಿದೆ'. ಪ್ರಾಣಿಗಳ ಮೇಲೆ ಹೆಚ್ಚಿನ ಅಥವಾ ನಿರ್ಣಾಯಕ ಪ್ರಯೋಗಗಳನ್ನು ನಡೆಸದೇ ಮನುಷ್ಯರ ಮೇಲೆ ಪ್ರಯೋಗ ನಡೆಸುವುದು ಸರಿಯಲ್ಲ ಎಂಬುದು ಸಹೇಲಿ ಸಂಘಟನೆಯ ಅಭಿಪ್ರಾಯ.

ಸರ್ಕಾರದ ಜನಸಂಖ್ಯಾ ಯೋಜನೆಯ ಬಗ್ಗೆ ಪ್ರಶ್ನಿಸುತ್ತ ದೆಹಲಿಯ ಸಹೇಲಿ ಮಹಿಳಾ ರಿಸೋರ್ಸ್ ಸೆಂಟರ್ ಮತ್ತು ಫೋರಂ ಫಾರ್ ವುಮೆನ್ ಹೆಲ್ತ್ ಸಂಘಟನೆಗಳು ಗರ್ಭನಿರೋಧಕ ಲಸಿಕೆಯ ನಿರ್ಬಂಧದ ಬಗ್ಗೆ ಒತ್ತಾಯಿಸುತ್ತಿವೆ.

ನಮ್ಮ ದೇಶದ ಶೇಕಡಾ 90 ಭಾಗ ಮಹಿಳೆಯರು ರಕ್ತಹೀನತೆ ಹಾಗೂ ನ್ಯೂನ ಪೋಷಣೆಯಿಂದ ಬಳಲುತ್ತಿದ್ದಾರೆ. ಅವರಿಗೆ ಸಾಕಷ್ಟು ಉತ್ತಮ ಆಹಾರ, ಶುದ್ಧವಾದ ನೀರು ಹಾಗೂ ಪ್ರಾಥಮಿಕ ಆರೋಗ್ಯ ರಕ್ಷಣೆಯ ಬಗ್ಗೆ ತಿಳುವಳಿಕೆಯಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವರ ಆರೋಗ್ಯವನ್ನು ಇನ್ನಷ್ಟು ಹದಗೆಡಿಸುವ ಹಾಗೂ ಜೀವನಪೂರ್ತಿ ಕಾಯಿಲೆಯಿಂದ ನರಳಬೇಕಾದ ಪರಿಸ್ಥಿತಿ ತಂದೊಡ್ಡುವಂತಹ ಗರ್ಭನಿರೋಧಕ ಲಸಿಕೆ ನಮಗೆ ಬೇಕೆ?

ಅನುವಾದ : **ಡಾ. ವಸುಂಧರಾ ಭೂಪತಿ**

ಬೆಂಗಳೂರು - 79

---

ಜಾಗತೀಕರಣದಿಂದ ಕಾರ್ಮಿಕರ ಆದಾಯದ ಮೇಲೆ ತೀವ್ರ ಪೆಟ್ಟು ಬಿದ್ದಿದೆ. ಉದ್ಯಮಿಗಳ ಒತ್ತಡಕ್ಕೆ ಮಣಿದು ಕೇಂದ್ರ ಸರ್ಕಾರವು, ಕಾರ್ಮಿಕರ ಸಂಘಟನೆ ಹಾಗೂ ಹೋರಾಟದ ಹಕ್ಕುಗಳನ್ನು ಮೊಟಕುಗೊಳಿಸಲು ಸಂಬಂಧಪಟ್ಟ ಕಾನೂನಿಗೆ ತಿದ್ದುಪಡಿ ತರಲು ಪ್ರಯತ್ನಿಸುತ್ತಿದೆ. ಇದಕ್ಕಾಗಿ ಎರಡನೇ ಕಾರ್ಮಿಕ ಆಯೋಗ ರಚಿಸಲಾಗಿದೆ. ಕಾರ್ಮಿಕರನ್ನು ಕೆಲಸದಿಂದ ತೆಗೆಯುವ ಪ್ರಕ್ರಿಯೆ ಸರಳೀಕರಣ, ದುಡಿಮೆ ಅವಧಿಯ 8ರಿಂದ 12 ಗಂಟೆಗೆ ಹೆಚ್ಚಳ: ಗುತ್ತಿಗೆ ಆಧಾರದ ಮೇಲೆ ಕಾರ್ಮಿಕರ ನೇಮಕ, ಸಂಘದ ನೋಂದಣಿ - ಮಾನ್ಯತೆ ಕಾನೂನು ಕಠಿಣ, ನೂರಕ್ಕಿಂತ ಹೆಚ್ಚು ಕಾರ್ಮಿಕರಿರುವ ಕಾರ್ಖಾನೆಗಳನ್ನು ಮುಚ್ಚಲು ಸರ್ಕಾರದ ಅನುಮತಿ ಪಡೆಯಬೇಕೆಂಬ ಕಡ್ಡಾಯದ ರದ್ದು.... ಹೀಗೆ ಕಾರ್ಮಿಕರ ಹಿತಾಸಕ್ತಿಗೆ ವಿರುದ್ಧವಾದ ಕ್ರಮಗಳನ್ನು ಆಯೋಗ ಶಿಫಾರಸ್ಸು ಮಾಡಬೇಕೆಂದಿದೆ.

**ಜಿ. ಎನ್. ನಾಗರಾಜ್**, (ಸಿಪಿಎಂ ನಾಯಕರು)

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ**

ಸಂ. ಮಂಡಳಿ

REGD No. KRNA 324

BOOK-POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067